೩೭೦

# ಜಾನಪದದಲ್ಲಿ ಆರ್ಥಿಕ ವಿಚಾರಗಳು

ಮಹಾಂತೇಶ ಎಸ್. ಗುಬ್ಬೇವಾಡ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಿಶಂಬರ, ೧೯೮೩

ಉಪನ್ಯಾಸ ಗ್ರಂಥಮಾಲೆ

೩೭೦

# ಜಾನಪದದಲ್ಲಿ ಆರ್ಥಿಕ ವಿಚಾರಗಳು

ಶ್ರೀ ಮಹಾಂತೇಶ ಎಸ್. ಗುಬ್ಬೇವಾಡ




ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಗಸ್ಟ, ೧೯೮೬

ಪ್ರಕಾಶಕರು :

**ಎಸ್. ಬಿ. ನಾಯಕ**

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಅಗಸ್ಟ, ೧೯೮೬



ಬೆಲೆ : ೫೦ ಪೈಸೆ

ಮುದ್ರಕರು :

ರಾಜಶ್ರೀ ಪ್ರಿಂಟಿಂಗ ಪ್ರೆಸ್

ತಡಕೋಡ ಗಲ್ಲಿ

ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ

ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೭೯ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು—ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಸ್. ಜಿ. ದೇಸಾಯಿ
ಕುಲಪತಿ

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗವು ೧೯೮೩ ರ ಜುಲೈ ತಿಂಗಳ ೬ ಹಾಗೂ ೭ ದಿನಾಂಕಗಳಂದು ಬೆಳಗಾಂವ ಜಿಲ್ಲೆಯ ಸುಕ್ಷೇತ್ರ ನಿಡಸೋಸಿಯಲ್ಲಿ ಶ್ರೀ ಮ.ನಿ.ಪ್ರ. ಜಗದ್ಗುರು ನಿಜಲಿಂಗೇಶ್ವರ ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ೩೯ ನೇ ಉಪನ್ಯಾಸ ಶಿಬಿರವನ್ನು ಏರ್ಪಡಿಸಿದ್ದಿತು. ಆ ಉಪನ್ಯಾಸ ಶಿಬಿರದಲ್ಲಿ, "ಜಾನಪದದಲ್ಲಿ ಆರ್ಥಿಕ ವಿಚಾರಗಳು" ಎಂಬ ವಿಷಯ ಕುರಿತು ನಾನು ಮಾಡಿದ ಭಾಷಣದ ಪ್ರತಿರೂಪವೇ ಈ ಚಿಕ್ಕ ಕೃತಿ.

ಗಾದೆಗಳಲ್ಲಿ ಅಡಕವಾಗಿರುವ ಆರ್ಥಿಕ ವಿಚಾರಗಳಿಗೆ ಮಾರುಹೋದ ನಾನು ಜಾನಪದದಲ್ಲಿ ಆರ್ಥಿಕ ವಿಚಾರಗಳನ್ನು ಹುಡುಕುವ ಹುಚ್ಚು ಹವ್ಯಾಸಕ್ಕೆ ಕೈ ಹಾಕಿದೆ. ಜಾನಪದ ಸಾಹಿತ್ಯದ ಗಂಧವಿಲ್ಲದ ನನಗೆ, ಸಾಹಿತ್ಯಸಾಗರದಲ್ಲಿ ಧುಮಿಕಿದಾಗ ಎದುರಿಸಿಬೇಕಾದ ತೊಂದರೆ ಅಷ್ಟಿಷ್ಟಲ್ಲ. ತೇಲುತ್ತ, ಮುಳುಗುತ್ತ ಕೈ ಕಾಲು ಬಡಿಯುತ್ತ ದಡ ಸೇರಿದಂತೆ ಹಲವಾರು ಗ್ರಂಥಗಳನ್ನು ಕಿತ್ತಿ ಹಾಕಿ, ಹಲವಾರು ಜನರ ಬಾಯಿಯಿಂದ ಕೇಳಿದ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲು ಪ್ರಯತ್ನಿಸಿದ್ದೇನೆ.

ಈ ಕಿರು ಹೊತ್ತಿಗೆಯು ನನ್ನ ಮೊದಲನೆಯ ಸಾಧನೆಯು ಭಾಷೆ ಅಷ್ಟು ಸಮರ್ಪಕವಾಗಿರಲಿಕ್ಕಿಲ್ಲ ಮತ್ತು ಸರಿಯಾದ ಶಬ್ದಗಳು ಹೊಂದಿರಲಿಕ್ಕಿಲ್ಲ ಹಾಗೂ ಎಲ್ಲ ವಿಚಾರಗಳನ್ನು ವಿವರಿಸಿರಲಿಕ್ಕಿಲ್ಲ. ಆದ್ದರಿಂದ ಸಹೃದಯ ಓದುಗರು ಕ್ಷಮಿಸಬೇಕಾಗಿ ಕೋರಿಕೆ.

ಈ ಕೃತಿಯನ್ನು ರಚಿಸುವಲ್ಲಿ ಹಲವಾರು ಗ್ರಂಥಗಳನ್ನು ಬಳಸಿಕೊಂಡಿದ್ದೇನೆ. ಆ ಎಲ್ಲ ಗ್ರಂಥಗಳ ಲೇಖಕರಿಗೆ ಚಿರಋಣಿ. ಹಸ್ತಪ್ರತಿಯನ್ನು ಓದಿ ಕೆಲವೊಂದು ಸಲಹೆ ಸೂಚನೆಗಳನ್ನು ನೀಡಿದ ಕರ್ನಾಟಕ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ವಿಭಾಗದ ಡಾ. ಎಂ. ಸಿ. ಕೊಡ್ಲಿ, ಡಾ. ಟಿ. ಕೆ. ಮೇಟಿ, ರಾಯಬಾಗ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯದ ಪ್ರೊ. ಜ್ಯೋತಿ ಹೊಸೂರ, ಪ್ರೊ. ಬಾಲಕೃಷ್ಣ ಜಂಬಗಿ, ಪ್ರೊ. ಭಾಸ್ಕರ ಪತ್ತಾರ ಮತ್ತು ಪ್ರೊ. ಆರ್. ಬಿ. ನಾವಿ ಹಾಗೂ ಪ್ರಾ. ಬಿ. ಜೆ. ಅಮ್ಮಣಗಿಯವರಿಗೆ ನನ್ನ ವಂದನೆಗಳು.

ಉಪನ್ಯಾಸ ಶಿಬಿರದಲ್ಲಿ ಭಾಗ ವಹಿಸುವ ಸದವಕಾಶ ಕಲ್ಪಿಸಿಕೊಟ್ಟು, ಅದರ ಆಧಾರದ ಮೇಲೆ ಬರೆದ ಲೇಖನವನ್ನು ಈ ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೂ, ಪ್ರಸಾರಾಂಗದ ನಿರ್ದೇಶಕ ಶ್ರೀ ಎಸ್. ಬಿ. ನಾಯಕ ಮತ್ತು ಸಹಾಯಕ ನಿರ್ದೇಶಕ ಶ್ರೀ ಎಲ್. ಎಮ್. ಗುಡ್ಡೀನ ಅವರಿಗೂ ನನ್ನ ಕೃತಜ್ಞತೆಗಳು. ಹಸ್ತಪ್ರತಿಯನ್ನು ಬೆರಳಚ್ಚು ಮಾಡಿ ಸಹಕರಿಸಿದ ರಾಯಬಾಗ ಗುರುಕೃಪಾ ಬೆರಳಚ್ಚು ವಿದ್ಯಾಲಯದ ಶ್ರೀ ಕೆ. ಟಿ. ಗುಡೋಡಗಿ ಅವರನ್ನು ಈ ಸಂದರ್ಭದಲ್ಲಿ ಸ್ಮರಿಸದಿರಲಾರೆ.

ಮಹಾಂತೇಶ ಗುಬ್ಬೇವಾಡ

ಕಲಾ ಹಾಗೊ ವಾಣಿಜ್ಯ
ಮಹಾವಿದ್ಯಾಲಯ,
ರಾಯಬಾಗ

# ಪರಿವಿಡಿ

# ೧. ಪೀಠಿಕೆ

ಪ್ರಪಂಚದಲ್ಲಿ ಪ್ರತಿಯೊಬ್ಬನೂ ವಿವಿಧ ಕೆಲಸಗಳಲ್ಲಿ ತೊಡಗಿರುವದನ್ನು ನಾವು ಕಾಣುತ್ತೇವೆ. ರೈತರು ಹೊಲದಲ್ಲಿ ದುಡಿಯುತ್ತಿದ್ದಾರೆ, ಕಾರ್ಮಿಕರು ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ, ವ್ಯಾಪಾರಸ್ಥರು ವ್ಯಾಪಾರದಲ್ಲಿ ತೊಡಗಿದ್ದಾರೆ, ಇನ್ನಿತರರು ಇನ್ನುಳಿದ ಕೆಲಸಗಳಲ್ಲಿ ತೊಡಗಿದ್ದಾರೆ. ಇವರೆಲ್ಲರೂ ಏತಕ್ಕಾಗಿ ದುಡಿಯುತ್ತಿದ್ದಾರೆ?

ಪ್ರತಿಯೊಬ್ಬ ಮಾನವನಿಗೆ ಆಹಾರ, ಬಟ್ಟೆ, ವಸತಿ, ಔಷಧ, ಮೊದಲಾದ ಜೀವನಾವಶ್ಯಕ ವಸ್ತುಗಳು ಬೇಕು. ಇವುಗಳಿಲ್ಲದೇ ಅವನು ಜೀವಿಸಲಾರ. ಮಾನವನ ಈ ಬಯಕೆಗಳಿಗೆ ಮಿತಿ ಎಂಬುದೇ ಇಲ್ಲ. ಆದರೆ ಅವನ ಬಯಕೆಗಳನ್ನು ತೃಪ್ತಿಪಡಿಸುವ ವಸ್ತುಗಳಿಗೆ ಮಾತ್ರ ಮಿತಿಯಿದೆ. ಆದ್ದರಿಂದ ಆ ವಸ್ತುಗಳನ್ನು ಬೆಲೆ ಕೊಟ್ಟು ಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಅವನಿಗೆ ಹಣ ಬೇಕು. ಆ ಹಣವನ್ನು ದೊರಕಿಸಲು ಅವನು ದುಡಿಯಬೇಕಾಗುತ್ತದೆ. ದುಡಿದು ಗಳಿಸಿದ ಹಣದಿಂದ ಅವನು ತನಗೆ ಬೇಕಾದ ವಸ್ತುಗಳನ್ನು ಕೊಂಡು ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುತ್ತಾನೆ. ಹೀಗೆ ಹಣ ಗಳಿಸಲು ಕೈಕೊಂಡ ಚಟುವಟಿಗಳಿಗೆ ಅರ್ಥಶಾಸ್ತ್ರದಲ್ಲಿ ಆರ್ಥಿಕ ಚಟುವಟಿಕೆಗಳೆಂದು ಕರೆಯುತ್ತಾರೆ. ಬಯಕೆಗಳೇ ಆರ್ಥಿಕ ಚಟುವಟಿಕೆಗಳ ಮೂಲ.

ದುಡಿತವಿಲ್ಲದೆ ಗಳಿಕೆಯಿಲ್ಲ, ಗಳಿಕೆ ಇಲ್ಲದೆ ಬಯಕೆಗಳ ತೃಪ್ತಿಯಿಲ್ಲ. ಬಯಕೆಗಳಿರುವದರಿಂದ ಮಾನವನು ದುಡಿಯುತ್ತಾನೆ. ದುಡಿತದಿಂದ ಹಣ ಗಳಿಸುತ್ತಾನೆ. ಬಂದ ಹಣದಿಂದ ವಸ್ತುಗಳನ್ನು ಪಡೆದು ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳುತ್ತಾನೆ. ಹೀಗೆ ಬಯಕೆ — ದುಡಿತ – ತೃಪ್ತಿ ( Wants-Efforts-Satisfaction) ಇವು ಒಂದನ್ನೊಂದು ಅನುಸರಿಸುತ್ತವೆ. ಮಾನವನ ಈ ಚಟುವಟಿಕೆಗಳು ನಿರಂತರವಾಗಿ ಚಕ್ರಾಕಾರದಲ್ಲಿ ಚಲಿಸುತ್ತಿರುತ್ತವೆ. ಆದ್ದರಿಂದ ಬಯಕೆ-ದುಡಿತ-ತೃಪ್ತಿ ಇವೇ ಅರ್ಥಶಾಸ್ತ್ರದ ಆಧಾರಸ್ತಂಭಗಳಾಗಿವೆ.

ಆದಿ ಮಾನವನ ಆರ್ಥಿಕ ಜೀವನವು ಬಹಳ ಸರಳವಾಗಿತ್ತು. ತನಗೆ ಬೇಕಾದ ವಸ್ತುಗಳನ್ನು ತಾನೇ ತಯಾರಿಸಿಕೊಳ್ಳುತ್ತಿದ್ದನು. ತನಗೆ ಬೇಕಾದ ಆಯುಧಗಳನ್ನು ತಾನೇ ಸಿದ್ಧಪಡಿಸಿಕೊಳ್ಳುತ್ತಿದ್ದನು; ಅವನ ಬಯಕೆಗಳೂ ಕೂಡ ಬಹಳ ಕಡಿಮೆ ಇದ್ದವು; ಮತ್ತು ಅವುಗಳನ್ನು ಅವನು ಸುಲಭವಾಗಿ ಈಡೇರಿಸಿಕೊಳ್ಳುತ್ತಿದ್ದನು. ಆದರೆ ಇಂದಿನ ಪರಿಸ್ಥಿತಿಯೇ ಬೇರೆ. ಮಾನವನ ಆರ್ಥಿಕ ಜೀವನ ಬಹಳ ಕ್ಲಿಷ್ಟವಾಯುವಾಗಿದೆ. ಅವನ ಬಯಕೆಗಳು ಅಪರಿಮಿತವಾಗಿವೆ. ಈ ಅಪರಿಮಿತ ಬಯಕೆಗಳನ್ನು ಈಡೇರಿಸಿಕೊಳ್ಳುವದಕ್ಕೆ "ಉಪಭೋಗ" (Consumption) ಎಂದು ಕರೆಯುವರು. ಮತ್ತು ಬಯಕೆಗಳ ಈಡೇರಿಕೆಗಾಗಿ ವಸ್ತುಗಳನ್ನು ಉತ್ಪಾದಿಸುವ ಕ್ರಿಯೆಗೆ ಉತ್ಪಾದನೆ (Production) ಎಂದು ಹೆಸರು. ಅಪರಿಮಿತ ಬಯಕೆಗಳ ಈಡೇರಿಕೆಗಾಗಿ ಮಾನವನು ಇಂದು ಇತರರನ್ನು ಅವಲಂಬಿಸಿರುತ್ತಾನೆ. ತಾನು ಉತ್ಪಾದಿಸಿದ

ವಸ್ತುಗಳನ್ನೆಲ್ಲ ತಾನೊಬ್ಬನೇ ಉಪಭೋಗಿಸುವದಿಲ್ಲ; ಮತ್ತು ಉಪಭೋಗಿಸುವ ಎಲ್ಲ ವಸ್ತುಗಳನ್ನು ತಾನೊಬ್ಬನೇ ಉತ್ಪಾದಿಸುವದಿಲ್ಲ, ತಾನು ತಯಾರಿಸಿದ ವಸ್ತುಗಳನ್ನು ಇತರರಿಗೆ ಕೊಟ್ಟು ಇತರರಿಂದ ಅವರು ತಯಾರಿಸಿದ ವಸ್ತುಗಳನ್ನು ಪಡೆಯುತ್ತಾನೆ. ಹೀಗೆ ತಾನು ಉತ್ಪಾದಿಸಿದ ವಸ್ತುಗಳನ್ನು ಪೇಟೆಯಲ್ಲಿ ಹಣಕ್ಕೆ ಮಾರಾಟ ಮಾಡಿ ಆ ಹಣದಿಂದ ತನಗೆ ಬೇಕಾದ ವಸ್ತುಗಳನ್ನು ಇತರರಿಂದ ಪಡೆಯುವದಕ್ಕೆ 'ವಿನಿಮಯ' (Exchange) ಎಂದು ಕರೆಯುತ್ತಾರೆ.

ಒಂದು ಆರ್ಥಿಕ ವ್ಯವಸ್ಥೆಯಲ್ಲಿ ಉತ್ಪಾದಿಸಲ್ಪಡುವ ರಾಷ್ಟ್ರೀಯ ವರಮಾನವನ್ನು ಉತ್ಪಾದನಾ ಘಟಕಗಳು ತಮ್ಮ ತಮ್ಮಲ್ಲಿ ಹಂಚಿಕೊಳ್ಳುತ್ತವೆ. ಹೀಗೆ ಹಂಚಿಕೊಳ್ಳುವದಕ್ಕೆ 'ವಿತರಣೆ' (Distribuiton) ಎನ್ನುವರು.

ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ವಿತರಣೆ ಇವು ಅರ್ಥಶಾಸ್ತ್ರದ ಮುಖ್ಯ ಅಂಗಗಳಾಗಿವೆ. ಇವುಗಳ ಜೊತೆಗೆ ಮಾನವನ ಜೀವನದಲ್ಲಿ ಮಹತ್ವದ ಪಾತ್ರವನ್ನಾಡುವ ಹಣ, ಬ್ಯಾಂಕು, ವಿದೇಶಿ ವ್ಯಾಪಾರ, ಸಾರ್ವಜನಿಕ ಹಣಕಾಸು, ಹಾಗೂ ಆರ್ಥಿಕ ಯೋಜನೆಗಳು ಸಹ ಇಂದು ಅರ್ಥಶಾಸ್ತ್ರದ ಭಾಗಗಳೆಂದು ಪರಿಗಣಿಸಲ್ಪಟ್ಟಿವೆ.

ಹೀಗೆ ಪಾಶ್ಚಿಮಾತ್ಯ ವಿದ್ವಾಂಸರ ಪ್ರಭಾವದಿಂದ ಅರ್ಥಶಾಸ್ತ್ರಕ್ಕೆ ಒಂದು ಚೌಕಟ್ಟು ಬಂದಿದ್ದರೂ ನಮ್ಮ ಜಾನಪದದ ಅಂಗಗಳಾದ ಜಾನಪದ ವಾಙ್ಮಯ, ಜಾನಪದ ಧರ್ಮ, ಜಾನಪದ ವಿಜ್ಞಾನ, ಜಾನಪದ ರೂಢಿ, ಸಂಪ್ರದಾಯ ಹಾಗೂ

ಜಾನಪದ ಕ್ರಿಯೆಗಳಲ್ಲಿ ಹಲವಾರು ಆರ್ಥಿಕ ವಿಚಾರಗಳನ್ನು ಕಾಣುತ್ತೇವೆ. ಅವು ವೈಜ್ಞಾನಿಕವಾಗಿ ವರ್ಗೀಕರಣವಾಗದೇ ಮೂಲ ರೂಪದಲ್ಲಿ ದೊರೆಯುತ್ತವೆ.

ಜಾನಪದ ಆರ್ಥಿಕ ವಿಚಾರಗಳನ್ನು ಅರಿತುಕೊಳ್ಳುವ ಪೂರ್ವದಲ್ಲಿ 'ಜಾನಪದ' ಅಂದರೇನು ? ಎಂಬುದನ್ನು ತಿಳಿದು ಕೊಳ್ಳುವದು ಬಹುಮುಖ್ಯ.

'ಜಾನಪದ' ಎಂಬ ಪಾರಿಭಾಷಿಕ ಪದವನ್ನು ಇಂಗ್ಲೀಷದ Folklore ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ರೂಢಿಸಿ ಕೊಂಡಿದ್ದಾರೆ. 'ಜಾನಪದ' ಎಂಬುದು 'ಜನಪದ'ದಿಂದ ಬಂದಿದೆ, ಜನಪದ ಎಂದರೆ 'ಸಾಮಾನ್ಯ ಜನವರ್ಗ', ಅವರ ಲ್ಲಿಯೂ ಒಂದು ವಿಶಿಷ್ಟ ಮನೋವೃತ್ತಿಯ ಜನವರ್ಗ. ಆದ್ದ ರಿಂದ 'ಜಾನಪದ' ಎಂದರೆ ಜನಪದಕ್ಕೆ (Folk) ಸಂಬಂಧ ಪಟ್ಟಿದ್ದು ಎಂದರ್ಥ. ಇಂಥ ಜನಪದಕ್ಕೆ ಸಂಬಂಧಿಸಿದ ಜೀವನ ವಿಧಾನ, ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯ ವಿಜ್ಞಾನ. ಧರ್ಮ ಇವೆಲ್ಲವುಗಳ ಮೊತ್ತಕ್ಕೆ "ಜಾನಪದ" (Folklore) ಎಂದು ಜಾನಪದ ವಿದ್ವಾಂಸರು ಕರೆಯುತ್ತಾರೆ.

ಜಾನಪದ ಇಂದು ನಿನ್ನೆಯದಲ್ಲ. ಆದಿಮಾನವನು ಪ್ರಕೃತಿ ಯೊಂದಿಗೆ ಹೋರಾಡುವಾಗ ಅವನಲ್ಲಿ ಹುಟ್ಟಿದ ಭಾವನೆಗಳಿಂದ ಜಾನಪದ ಸಂಪ್ರದಾಯ ಹುಟ್ಟಿ ಬೆಳೆದುಬಂದಿದೆ. ಮಾನವನ ಬಾಳು ವಿಸ್ತಾರವಾದಂತೆ, ಅವನ ಜೀವನಾನುಭವ ಹೆಚ್ಚಿದಂತೆ ಜಾನಪದ ಜ್ಞಾನಭಂಡಾರ ಹೆಚ್ಚುತ್ತ ನಡೆಯಿತು. ಅವನ ಬುದ್ಧಿ ಮನಸ್ಸುಗಳು ವಿಕಾಸವಾದಂತೆಲ್ಲಾ ಜಾನಪದ ಕಲೆಗಳು ಹೊರ

ಹೊಮ್ಮಿದವು. ಅವನ ನಾಲಿಗೆಯ ಮೇಲೆ ಮಾತು ಕುಣಿದಾಗಲೇ 'ಜಾನಪದ' ಸಾಹಿತ್ಯ ಉದ್ಭವವಾಯಿತು, ಎಂದು ವಿದ್ವಾಂಸರ ಅಭಿಪ್ರಾಯ.

ಜಾನಪದ ಸೃಷ್ಟಿಕಾರ್ಯದಲ್ಲಿ ಹಳ್ಳಿಯ ರಸಿಕರಾಡಿದ ಪಾತ್ರ ಅಷ್ಟಿಷ್ಟಲ್ಲ. ಜಾನಪದ ಗೀತೆಗಳು, ಕತೆಗಳು, ಗಾದೆಗಳು, ಒಗಟುಗಳು ಮತ್ತು ಜಾನಪದ ಆಟಗಳು ತಂದೆಯಿಂದ ಮಗನಿಗೆ ಪಿತ್ರಾರ್ಜಿತ ಆಸ್ತಿಯಂತೆ ಮುನ್ನಡೆದಿವೆ. ಇವೆಲ್ಲವುಗಳು ಓದಿ ಕಲಿತುವುಗಳಲ್ಲ. ಆಡಿದ್ದನ್ನು ಕೇಳಿ, ಮಾಡಿದ್ದನ್ನು ನೋಡಿ ಕಲಿತವುಗಳು. ೧

ಆಧುನಿಕ ಸಮಾಜ, ವಿಜ್ಞಾನ ಮತ್ತು ಕಲೆಗಳಲ್ಲಿ ಇಂದು ಕಾಣುವ ಬದಲಾವಣೆ ಹಾಗೂ ಬೆಳವಣಿಗೆಯ ಆಧಾರ ಸ್ತಂಭಗಳೇ ಜಾನಪದ ಕಲೆ ಮತ್ತು ಸಂಸ್ಕೃತಿ. ಜಾನಪದ ನೃತ್ಯದ ವಿಷಯಗಳಂತೂ, ನಿತ್ಯಜೀವನದಿಂದ, ಅದರಲ್ಲಿಯೂ ಆರ್ಥಿಕ ವಿಷಯಗಳಿಂದ ಆಯ್ಕೆ ಮಾಡಿದಂತವುಗಳಾಗಿವೆ[೨]. ಉದಾಹರಣೆಗಾಗಿ–ಭೂಮಿಯನ್ನು ಊಳುವದು ಬಿತ್ತುವದು, ಸುಗ್ಗಿಯಲ್ಲಿ ಪೈರು ಕೊಯ್ಯುವದು, ಹಂತಿ ಹೊಡೆಯುವದು ಇವೇ ಮೊದಲಾದವುಗಳು ಜಾನಪದ ನೃತ್ಯದ ವಿಷಯಗಳಾಗಿವೆ. ಜಾನಪದ ನೃತ್ಯದಂತೆಯೇ ಜಾನಪದ ಕಲಾವಿದರು ಆರ್ಥಿಕ ಚಟುವಟಿಕೆಗಳನ್ನು ಮಾಡುತ್ತಿದ್ದಂತಯೇ ಜಾನಪದ ಗೀತೆಗಳನ್ನು ರಚಿಸಿ ಹಾಡುವ ವಾಡಿಕೆ ಇದೆ. ಹಾಡಿನ ಜೋಡಿ ಇಲ್ಲದೆ ಯಾವ

---

೧. ಜಾನಪದ ಅಧ್ಯಯನ, ಡಾ॥. ದೇ. ಜವರೇಗೌಡ.

೨. ಕರ್ನಾಟಕ ಜಾನಪದ ರಂಗಭೂಮಿ. ಶ್ರೀ ಎಂ. ಟಿ. ಧೂಪದ

ಕೆಲಸವೂ ಸಾಗುವುದಿಲ್ಲ. ಕುಟ್ಟುವದು, ಬೀಸುವದು, ಬಿತ್ತನೆ, ಮಾಡುವಾಗ, ಕಳೆಕೀಳುವಾಗ, ಪೈರು ಕೊಯ್ಯುವಾಗ ಮಣ್ಣು ಹೊರುವಾಗ ಮತ್ತು ಗಾಡಿ ಹೊಡೆಯುವಾಗ ಸಾಮೂಹಿಕ ವಾಗಿಯೂ ಅಥವಾ ವೈಯಕ್ತಿಕವಾಗಿಯೂ ಗೀತೆಗಳನ್ನು ಹಾಡುತ್ತಾರೆ. ಈ ಗೀತೆಗಳು ಅವರ ಕಾರ್ಯದ ಕಾರ್ಯ ದಕ್ಷತೆಯನ್ನು ಹೆಚ್ಚಿಸುವ ಸಾಧನಗಳಾಗಿವೆ. ಕಲಾವಿದರು ಈ ಕಾರ್ಯಗಳನ್ನು ನಿರ್ವಹಿಸುತ್ತಿದ್ದಂತೆಯೇ ಹಾಡುಗಳನ್ನು ತಮ್ಮದೇ ಆದ ರೀತಿಯಲ್ಲಿ ರಚಿಸಿದರು; ಮತ್ತು ದುಡಿಯು ತ್ತಲೇ ಹಾಡಿದರು. ದುಡಿಮೆಯ ಶ್ರಮವನ್ನು ಹಾಡಿನ ಹರ್ಷದಲ್ಲಿ ಕಳೆದುಕೊಳ್ಳುವರು,

## ೨. ಗಳಿಕೆ-ಉಳಿಕೆ

ಬಯಕೆ-ದುಡಿತ-ತೃಪ್ತಿ (Wants-Efforts-Satis faction) ಇವು ಅರ್ಥಶಾಸ್ತ್ರದ ಆಧಾರ ಸ್ತಂಭಗಳಾಗಿವೆ. ಎಂಬುದನ್ನು ನೋಡಿದ್ದೇವೆ. ದುಡಿತವಿಲ್ಲದೇ ಗಳಿಕೆಯಿಲ್ಲ, ಗಳಿಕೆಯಿಲ್ಲದೇ ಬಯಕೆಗಳ ತೃಪ್ತಿಯಿಲ್ಲ, ಆದ್ದರಿಂದ ಬಯಕೆ ಗಳ ತೃಪ್ತಿಗೋಸ್ಕರ ಮಾನವನು ದುಡಿಯುತ್ತಾನೆ.

ಮಾನವನು ಎರಡು ಬಗೆಯ ವಸ್ತುಗಳನ್ನು ಉತ್ಪಾದಿ ಸುತ್ತಾನೆ. ಅವು ಗ್ರಾಹಕರ ವಸ್ತುಗಳು (Consumers goods) ಮತ್ತು ಉತ್ಪಾದಕರ ಅಥವಾ ಬಂಡವಾಳದ ಸರಕುಗಳು Croducers goods) ಗ್ರಾಹಕರ ವಸ್ತುಗಳು ಮಾನ

ವನ ಇಷ್ಟಗಳನ್ನು ನೇರವಾಗಿ ತೃಪ್ತಿ ಪಡಿಸುತ್ತವೆ. ಬಂಡವಾಳದ ಸರಕುಗಳು ಅಂದರೆ ಯಂತ್ರೋಪಕರಣಗಳು ಇತ್ಯಾದಿ ಉತ್ಪಾದನೆಯಲ್ಲಿ ಇತರ ಸರಕುಗಳನ್ನು ಉತ್ಪಾದಿಸಲು ಉಪಯೋಗಿಸಲ್ಪಡುತ್ತವೆ. ಸರಕುಗಳನ್ನು ಉತ್ಪಾದಿಸಿ ಮಾನವನು ಹಣ ಗಳಿಸುತ್ತಾನೆ. ಆ ಹಣದ ಆಧಾರದಿಂದ ಅವನು ತನ್ನ ಇಷ್ಟಗಳನ್ನು ತೃಪ್ತಿಪಡಿಸುವ ಗ್ರಾಹಕರ ವಸ್ತುಗಳನ್ನು ಕೊಳ್ಳುತ್ತಾನೆ. ಆದರೆ ಅವನು ತನ್ನ ಎಲ್ಲ ಆದಾಯವನ್ನು ಅವುಗಳ ಮೇಲೆ ವೆಚ್ಚ ಮಾಡದೇ ಕೆಲವೊಂದು ಹಣ ಉಳಿತಾಯ (Savings)ಮಾಡುವದುಂಟು. ಹೀಗೆ ಒಂದು ರಾಷ್ಟ್ರದಲ್ಲಿರುವ ಎಲ್ಲ ವ್ಯಕ್ತಿಗಳು ತಮ್ಮ ಆದಾಯದ ಕೆಲವೊಂದು ಭಾಗವನ್ನು ಉಳಿತಾಯ ಮಾಡುತ್ತಾರೆ. ರಾಷ್ಟ್ರೀಯ ಆದಾಯಕ್ಕೆ 'Y' (ವಾಯ್) ಎಂದು, ಉಪಭೋಗದ ವೆಚ್ಚಕ್ಕೆ (ಸಿ) 'C' ಎಂದು, ಉಳಿತಾಯಕ್ಕೆ 'S' (ಎಸ್) ಎಂದು ತಿಳಿದುಕೊಂಡು ಕೆಳಗಿನ ಸೂತ್ರವನ್ನು ರಚಿಸಿದ್ದಾರೆ.

ಒಟ್ಟು ಆದಾಯ = ಉಪಭೋಗದ ವೆಚ್ಚ + ಉಳಿತಾಯ.

$$'Y' = C + S$$

ಅಥವಾ

ಉಳಿತಾಯ = ಒಟ್ಟು ಆದಾಯ — ಉಪಭೋಗದ ವೆಚ್ಚ.

$$S = Y - C$$

ಹೀಗೆ ಉಳಿತಾಯ ಮಾಡಿದ ಹಣವನ್ನು ಉದ್ಯಮಗಳಲ್ಲಿ ಬಂಡವಾಳ ರೂಪದಲ್ಲಿ ತೊಡಗಿಸುವದರಿಂದ (investment) ಹೆಚ್ಚು ಹೆಚ್ಚು ಉದ್ಯೋಗ ಅವಕಾಶಗಳನ್ನು

ಸೃಷ್ಟಿಸಿ ಅಧಿಕ ಉತ್ಪಾದನೆ ಸಾಧ್ಯವಾಗುವದು. ಇದರಿಂದ ರಾಷ್ಟ್ರದ ಅಭಿವೃದ್ಧಿಯಾಗುವದು. ಆದ್ದರಿಂದ ಲಾರ್ಡಕೇನ್ಸ (Lord Keynes) ಎಂಬ ಅರ್ಥಶಾಸ್ತ್ರಜ್ಞರು ಉಳಿತಾಯದ ಎಲ್ಲ ಹಣವನ್ನು ಉದ್ದಿಮೆಗಳಲ್ಲಿ ತೊಡಗಿಸಿದಾಗಲೇ ಆರ್ಥಿಕ ಸಮತೋಲನ ಕಾಯ್ದುಕೊಂಡು ಹೋಗಲು ಸಾಧ್ಯವಿದೆ ಎಂದು ಪ್ರತಿಪಾದಿಸುತ್ತಾರೆ.

ಇದನ್ನೇ ನಮ್ಮ ಜಾನಪದರು ತಮ್ಮ ಭಾಷೆಯಲ್ಲಿ ಹೀಗೆ ಹೇಳುವದುಂಟು. ಗಳಿಕೆಯು ಬಳಿಕೆ ಮತ್ತು ಉಳಿಕೆಗೆ ಸಮಾನವಾಗಿರುತ್ತದೆ. ಗಳಿಕೆ ಹೆಚ್ಚಾದರೆ ಬಳಿಕೆ ಮತ್ತು ಉಳಿಕೆಗಳು ಹೆಚ್ಚುತ್ತವೆ. ಗಳಿಕೆ ಕಡಿಮೆಯಾದರೆ ಬಳಿಕೆ ಮತ್ತು ಉಳಿಕೆಗಳು ಕಡಿಮೆಯಾಗುತ್ತವೆ. ಎಂಬುದೇ ನಮ್ಮ ಜಾನಪದರ ಅನುಭವವಾಗಿದೆ.

ಇಂದಿನ ಸುಸಜ್ಜಿತ ಆರ್ಥಿಕ ವ್ಯವಸ್ಥೆಗೂ ನಮ್ಮ ಜಾನಪದ ಆರ್ಥಿಕ ವ್ಯವಸ್ಥೆಗೂ ಇರುವ ವ್ಯತ್ಯಾಸವೆಂದರೆ, ಇಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಗ್ರಾಹಕರು ಉಳಿತಾಯ ಮಾಡಿದ ಹಣವನ್ನು ಉದ್ದಿಮೆಗಳಲ್ಲಿ ಬಂಡವಾಳದ ರೂಪದಲ್ಲಿ ತೊಡಗಿಸುತ್ತಾರೆ. ಇಲ್ಲವೇ ರಕ್ಷಣೆಗೋಸ್ಕರ ಬ್ಯಾಂಕುಗಳಲ್ಲಿ ಠೇವು ರೂಪದಲ್ಲಿ ಇಡುತ್ತಾರೆ. ಅಥವಾ ಇನ್ನಾವುದೋ ರೀತಿಯಲ್ಲಿ ಲಾಭ ಬರುವ ಹಾಗೆ ಹಣವನ್ನು ತೊಡಗಿಸುತ್ತಾರೆ. ಆದರೆ ಜಾನಪದ ಆರ್ಥಿಕ ವ್ಯವಸ್ಥೆಯಲ್ಲಿ ಉಳಿತಾಯವನ್ನು ಸಂಗ್ರಹಿಸಲು ಬ್ಯಾಂಕ ಪದ್ಧತಿಯೂ ಅಸ್ತಿತ್ವದಲ್ಲಿ ಇರಲಿಲ್ಲ. ಬಂಡವಾಳವನ್ನು ಉತ್ಪಾದನೆಯಲ್ಲಿ

ತೊಡಗಿಸಲು ಉದ್ದಿಮೆಗಳು ಅಸ್ತಿತ್ವದಲ್ಲಿ ಇರಲಿಲ್ಲ; ಅಸ್ತಿತ್ವದಲ್ಲಿದ್ದಂಥ ಉದ್ದಿಮೆಗಳು ಕೇವಲ ಗೃಹಕೈಗಾರಿಕೆಗಳು ಹಾಗೂ ಕುಟೀರ ಕೈಗಾರಿಕೆಗಳು. ಆ ಕೈಗಾರಿಕೆಗಳಿಗೆ ಇಂದಿನ ಕೈಗಾರಿಕೆಗಳಿಗೆ ಬೇಕಾಗುವಷ್ಟು ಬಂಡವಾಳದ ಅವಶ್ಯಕತೆ ಇರಲಿಲ್ಲ. ಆದ್ದರಿಂದ ಜಾನಪದರು ತಮ್ಮ ಉಳಿತಾಯವನ್ನು ದನಕರುಗಳ ರೂಪದಲ್ಲಿ ಅಥವಾ ಬೆಳ್ಳಿ ಬಂಗಾರದ ಆಭರಣಗಳಲ್ಲಿ ಮತ್ತು ತಾಮ್ರ ಹಿತ್ತಾಳಿಯಂತಹ ಲೋಹದ ವಸ್ತುಗಳ ರೂಪದಲ್ಲಿ ತೊಡಗಿಸುತ್ತಿದ್ದುದುಂಟು. ಅಂತಹ ಆಭರಣಗಳನ್ನು ರಕ್ಷಣೆಗೋಸ್ಕರ ನೆಲದಲ್ಲಿಯೋ ಅಥವಾ ಮನೆಯ ಗೋಡೆಗಳಲ್ಲಿಯೋ ಹುಗಿದಿಡುತ್ತಿದ್ದರು. ಎಷ್ಟೋ ಸಲ ತಾವೇ ಹುಗಿದಿಟ್ಟ ಸ್ಥಳವೂ ಕೂಡ ಅವರಿಗ ಸಿಗುತ್ತಿರಲಿಲ್ಲ- ಎಂಬುದಕ್ಕೆ ಇಂದು ಹಳೆಯ ಮನೆಯನ್ನು ಬಿಚ್ಚಿದಾಗ, ಊರ ಮುಂದಿನ ಹಳೆಯ ಗೋಡೆಗಳನ್ನು ಅಗೆದಾಗ ಆಭರಣಗಳು ತುಂಬಿದ ಕೊಡ, ಹಂಡೆಗಳು ಅಥವಾ ಹಳೆಯ ಕಾಲದ ನಾಣ್ಯಗಳು ದೊರೆಯುವದೇ ಸಾಕ್ಷಿಯಾಗಿದೆ.

## ೩. ಉತ್ಪಾದನೆ

ಸಾಮಾನ್ಯವಾಗಿ ದುಡಿಮೆ ಎಂದರೆ ಮಾನವನು ತನ್ನ ಬಯಕೆಗಳನ್ನು ಈಡೇರಿಸುವದಕ್ಕಾಗಿ ಕೈಕೊಳ್ಳುವ ಕೆಲಸಗಳೆಂದು ಅರ್ಥ. ಮಾನವನು ತನ್ನ ಹಸಿವನ್ನು ಹಿಂಗಿಸಿಕೊಳ್ಳುವುದಕ್ಕಾಗಿ ಒಂದಿಲ್ಲೊಂದು ಕಾರ್ಯದಲ್ಲಿ ನಿರತನಾಗಿರುತ್ತಾನೆ. ತಾನು ಕೊಂದ ಪ್ರಾಣಿಯ ಮಾಂಸ ಭಕ್ಷಣೆಯಿಂದ ಆರಂಭ

ವಾದ ಮಾನವನ ಕಸುಬು ಇಂದು ಕೃಷಿ ಕ್ಷೇತ್ರವನ್ನು ದಾಟಿ ಯಾಂತ್ರೀಕೃತ ಔದ್ಯೋಗಿಕ ರಂಗವನ್ನು ತಲುಪಿದೆ. ಸುಸಜ್ಜಿತವಾಗಿ ಸಂಘಟಿಸಲ್ಪಟ್ಟ ವೈಜ್ಞಾನಿಕ ಸಲಕರಣೆಗಳನ್ನೊಳಗೊಂಡ ಯಾಂತ್ರೀಕೃತ ಉತ್ಪಾದನೆ ಇಂದಿನದು.

ಆದರೆ ಜಾನಪದ ರೂಢಿಯಲ್ಲಿ ಕಂಡುಬರುವ ಉತ್ಪಾದನೆ ಪದ್ಧತಿ ಸಾಂಪ್ರದಾಯದ ಉತ್ಪಾದನೆ. ಅಲ್ಲಿ ಜಟಿಲ ಹಾಗೂ ಕ್ಲಿಷ್ಟಮಯವಾದ ಯಂತ್ರೋಪಕರಣಗಳ ಬಳಕೆಯಿಲ್ಲ. ಕೃಷಿ ರಂಗ ಪ್ರಧಾನ ರಂಗ. ಗ್ರಾಮೀಣ ಶ್ರೀಸಾಮಾನ್ಯರ ಮುಖ್ಯವಾದ ಕಾರ್ಯಗಳೆಂದರೆ ಕೃಷಿ ಮತ್ತು ನೇಯ್ಗೆ. ಬೇಸಾಯ ಒಂದೆರಡು ದಿವಸಗಳಲ್ಲಿ ಮುಗಿಯುವಂತಹುದಲ್ಲ. ಅದು ಒಂದು ಬಹು ದೀರ್ಘ ಕಾಲದ ಕಾರ್ಯಗತಿ. ಬೆಳಗಿನಿಂದ ಸಾಯಂಜೆಯವರೆಗೆ ಚಳಿ, ಗಾಳಿ, ಮಳೆ, ಬಿಸಿಲುಗಳೆನ್ನದೆ, ಹಸಿವು, ನೀರಡಿಕೆ ಎನ್ನದೆ ಹೆಂಡಿರು ಮಕ್ಕಳೊಡನೆ ನಿರಂತರವಾಗಿ ದುಡಿಯಬೇಕಾದ ಕೌಟುಂಬಿಕ ಕಾರ್ಯ. ಬಡತನದಲ್ಲಿ ಹುಟ್ಟಿ ದುಡಿಮೆಯೊಡನೆ ಬೆಳೆದು ತಾಪತ್ರಯಗಳನ್ನು ಜೀವನದುದ್ದಕ್ಕೂ ಎದುರಿಸುತ್ತ ಬಂದ ನಮ್ಮ ರೈತನ ದುಡಿಮೆ ಅಪಾರವಾದುದು.

ನಾಗರಿಕತೆಯ ಕುರುಹು ಆಗಿ ಬೇಸಾಯದ ನಂತರ ಬೆಳೆದು ಬಂದ ನೂಲುಗಾರಿಕೆ ಹಾಗೂ ನೇಯ್ಗೆಗಳು ಜಾನಪದರ ಗೃಹ ಕೈಗಾರಿಕೆಗಳಾಗಿವೆ. ಮಾನವನನ್ನು ಅನಾಗರಿಕತೆಯಿಂದ ನಾಗರಿಕತೆಗೆ ಪರಿವರ್ತಿಸಿದ ಪ್ರಥಮ ಯಂತ್ರ ರಾಟೆ. ನೇಗಿಲು ಗಂಡಸರ ಸಾಧನವಾದರೆ, ರಾಟೆ ಮತ್ತು ಬೀಸು ಕಲ್ಲುಗಳು

ಹೆಂಗಸರ ಸಾಧನಗಳು. ಇವೆರಡೂ ಸಂಸಾರದ ಕೇಂದ್ರ ಶಕ್ತಿಗಳು. ರಾಟಿ ನೂಲುವುದು, ನೇಯುವುದನ್ನು ಕುರಿತು ಜಾನಪದರು ಹಲವಾರು ಗೀತೆ, ಗಾದೆ, ಒಗಟುಗಳನ್ನು ರಚಿಸಿದ್ದುಂಟು. ರಾಟೆಯನ್ನು ಕುರಿತು ರಚಿಸಿದ ಒಂದು ಒಗಟನ್ನು ಇಲ್ಲಿ ಉದಾಹರಿಸಬಹುದು.

"ಸದಾ ಹೆಂಗಸರ ಸಂಗಾತಿಯಾಗಿದ್ದೂ ಸಂನ್ಯಾಸಿ,
ಗಾಳಿಯ ವೇಗ ಉಳ್ಳವನಾದರೂ ಮುಂದೆ ಹೆಜ್ಜೆ ಇಡದವನು,
ಇಡೀ ಜಗತ್ತಿಗೆ ವಸನವನ್ನು ಒದಗಿಸಿದರೂ ಸದಾ ಬೆತ್ತಲೆ.
ಪಂಚಮುಖನಾದರೂ ಏಕಹಸ್ತ"

ಇವನ್ಯಾರು ? ಇವನೇ ಚರಕಾಭಿಧಾನದ ರಾಟಿ [೧]

ಜಾನಪದ ಕಸಬುಗಳಲ್ಲಿ ಬಳಸಿಕೊಂಡ ರಾಟಿ ಬೀಸುಕಲ್ಲು, ಗಾಡಿಯ ಚಕ್ರ. ಕುಂಬಾರನ ಚಕ್ರಗಳ ಬಳಕೆಯು ಆಧುನಿಕ ಯಂತ್ರಗಳ ದಾಳಿಯಿಂದಾಗಿ ಕಡಿಮೆಯಾಗುತ್ತ ಬಂದರೂ ಇಂದಿನ ಯಾಂತ್ರೀಕರಣಕ್ಕೆ ಭದ್ರ ಬುನಾದಿಯನ್ನು ಒದಗಿಸಿವೆ.

ಆಧುನಿಕ ಉತ್ಪಾದನಾ ಪದ್ಧತಿಗೂ ಹಾಗೂ ಜಾನಪದ ಉತ್ಪಾದನಾ ಪದ್ಧತಿಗೂ ಹೋಲಿಸಿ ಅಭ್ಯಸಿಸುತ್ತಾ ಹೋದಂತೆ ಜಾನಪದರ ಆರ್ಥಿಕ ವಿಚಾರಗಳು ತಿಳಿದು ಬರುತ್ತವೆ.

---

೧) ಜಾನಪದ ಅಧ್ಯಯನ, ಡಾ: ದೇ. ಜವರೇಗೌಡ.

ಆಧುನಿಕ ಅರ್ಥ ಶಾಸ್ತ್ರದಲ್ಲಿ ಉತ್ಪಾದನಾ ಘಟಕಗಳನ್ನು ಅರ್ಥಶಾಸ್ತ್ರಜ್ಞರು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ: (೧) ಭೂಮಿ, (Land) (೨) ಶ್ರಮ, (Labour) (೩) ಬಂಡವಾಳ(Capital) (೪) ಸಂಘಟನೆ (Organisation). ಆದರೆ ಜಾನಪದ ಆರ್ಥಿಕ ವ್ಯವಸ್ಥೆಯಲ್ಲಿ ಈ ರೀತಿ ವೈಜ್ಞಾನಿಕ ವಿಂಗಡನೆ ಇಲ್ಲದಿದ್ದರೂ, ಜಾನಪದರು ಉಪಯೋಗಿಸುವ ಉತ್ಪಾದನಾ ಸಾಮಗ್ರಿಗಳನ್ನು ಕೆಳಗಿನಂತೆ ವಿಂಗಡಿಸಬಹುದು.

೧. ಭೂಮಿ: ಭೂಮಿತಾಯಿ, ದೇವರು, ಪ್ರಕೃತಿ, ಶಕ್ತಿ ಇತ್ಯಾದಿಗಳು.
೨. ಶ್ರಮ: ಕುಟುಂಬದ ಸದಸ್ಯರು, ಹಳ್ಳಿಯ ಆಯಗಾರರು, ದನಕರುಗಳು ಇತ್ಯಾದಿ.
೩. ಬಂಡವಾಳ; ಸುಲಭ ಹಾಗೂ ಸರಳ ಸಲಕರಣೆಗಳು (ಮುಖ್ಯವಾಗಿ ಕಟ್ಟಿಗೆಯಿಂದ ಹಾಗೂ ಕಬ್ಬಿಣದಿಂದ ತಯಾರಿಸಿದ ಉಪಕರಣಗಳಾದ ನೇಗಿಲು, ರೆಂಟೆ, ಕುಂಟಿ, ಕುರಿಪಿ, ಮೊಟ್ಟೆ (ಕಪಲಿ) ಇತ್ಯಾದಿಗಳು.)
೪. ಸಂಘಟನೆ: ಕುಟುಂಬದ ಮುಖ್ಯಸ್ಥರು.

೧. ಭೂಮಿ: ಭೂಮಿ ಉತ್ಪಾದನೆಯ ಒಂದು ಮುಖ್ಯ ಅಂಗ. ಭೂಮಿ ಇಲ್ಲದೇ ಉತ್ಪಾದನೆ ಇಲ್ಲ. ಇಂದಿನ ಉತ್ಪಾದನಾ ಪದ್ಧತಿಯಲ್ಲಿ ಭೂಮಿ ವಿಶಾಲವಾದ ಅರ್ಥವನ್ನು ಹೊಂದಿದೆ. ಭೂಮಿ ಎಂದರೆ ಉತ್ಪಾದನೆಯಲ್ಲಿ ಬಳಿಸಲಾ-

ುವ ನೈಸರ್ಗಿಕ ಸಂಪನ್ಮೂಲಗಳು. ಉದಾ: ಕಚ್ಚಾ ವಸ್ತು
ಗಳು, ನೀರು, ಹವಾಗುಣ ಇನ್ನಿತರ ಸಂಪನ್ಮೂಲಗಳು.

ಜಾನಪದ ರೂಢಿಯಲ್ಲಿ ಭೂಮಿಯು ದೇವರನ್ನು ಪ್ರತಿ
ಧಿಸುತ್ತದೆ. ನಗರದ ನಾಗರಿಕತೆಯಿಂದ ದೂರವಿರುವ ಹಳ್ಳಿ
ನಿಗೆ ಅವನ ಸುತ್ತಲಿನ ಪ್ರತಿ ವಸ್ತುವೂ ಜೀವವೆತ್ತಿರುತ್ತದೆ.
ಾಯಿ ಪ್ರಕೃತಿಯ ಮಡಿಲಲ್ಲಿ ಬೆಳೆದು ಬಾಳುವ ಆ ಭೂ
ರುಗನೊಂದಿಗೆ ಪ್ರಕೃತಿ ಮಾತನಾಡುತ್ತಾಳೆ. ಅವಳ ಕ್ರಿಯೆಗಳೆ
ಲ್ಲವೂ ಅವನಿಗೆ ನೇರವಾಗಿ ಅರ್ಥವಾಗುತ್ತವೆ. ಪ್ರಕೃತಿಯ
ಪ್ರತಿಯೊಂದು ದಿಕ್ಸೂಚಿ ಅವನಿಗೆ ಸಂದೇಶ. ಸೂರ್ಯನನ್ನು
ನೋಡಿಯೇ ವೇಳೆ ಗುರುತಿಸುತ್ತಾನೆ. ನಕ್ಷತ್ರಗಳನ್ನು ನೋಡಿ
ಯೇ ರಾತ್ರಿ ಗುರುತಿಸುತ್ತಾನೆ.

ರೈತನಿಗೆ ಪ್ರಕೃತಿಯ ಬಗ್ಗೆ ಬೇಸರ, ತಾತ್ಸಾರ ಭಾವ
ನೆಗಳು ಮೂಡದ ದಿನಗಳೆದಂತೆ ಅದರ ಬಗ್ಗೆ ಸಹವಾಸ ಸ್ನೇಹ
ವಾಗಿ, ಸ್ನೇಹ ಭಕ್ತಿ ರೂಪಕ್ಕಿಳಿದು, ತಮಗೆ ಸರ್ವ ವಿಧದಲ್ಲಿಯೂ
ರಕ್ಷೆಯಾಗಿರುವ ಪ್ರಕೃತಿಯನ್ನೇ ದೇವರನ್ನಾಗಿ ಮಾಡಿಕೊಂಡು
ಆರಾಧಿಸುವಂತೆ ಮಾಡುತ್ತದೆ. ಆಗ ಅವನಿಗೆ ಪ್ರಕೃತಿಯ ಪ್ರತಿ
ಕಲ್ಲು ಪ್ರತಿ ಗಿಡ ಮರಗಳು ದೇವರುಗಳಾಗಿ ಕಾಣಿಸುತ್ತವೆ. ಆ
ಪ್ರಕೃತಿ ದೇವರುಗಳನ್ನು ಆತ ಆರಾಧಿಸುತ್ತಾನೆ.[೧]

ಪ್ರತಿದಿನ ಮುಂಜಾನೆ ಎದ್ದು ಕಣ್ಣುಜ್ಜಿ, ಕೈನೋಡಿ
ಕೊಂಡು ಬೀದಿಗಿಳಿಯುವ ನಮ್ಮ ರೈತ ತನ್ನ ಹಟ್ಟಿಯ
ಮುಂದೆ ನಿಂತು;

೧. ಜಾನಪದ ಸಾಹಿತ್ಯ ದರ್ಶನ. ವ್ಯಿ. ಸು. ಶೇಷಗಿರಿರಾವ್.

"ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೋಳ ಭೂತಾಯಿ
ಎದ್ದೊಂದು ಘಳಿಗೆ ನೆನೆದೇನು"

ನಿದ್ರೆಯಿಂದ ಎದ್ದಕೂಡಲೇ ಭೂತಾಯಿಯ ನೆನಪೇ ಮಂಗಳಕರ ರೈತನಿಗೆ. ಭೂತಾಯಿಯನ್ನು ಸ್ತುತಿಸಿ, ತುಸು ಮಣ್ಣನ್ನು ತೆಗೆದುಕೊಂಡು ಹಣೆಗೆ ಹಚ್ಚಿಕೊಳ್ಳುತ್ತಾನೆ. ಹಾದಿ ಹಿಡಿದು ಹೊಲಕ್ಕೆ ಹೋಗುವಾಗ ಹಾದಿಯಲ್ಲಿ ಕಂಡ ಹೊಳೆ ಹಳ್ಳಗಳಿಗೂ ನಮನ ಸಲ್ಲಿಸುತ್ತಾನೆ.

ಮಣ್ಣು ಎಲ್ಲ ವಸ್ತುಗಳಿಗಿಂತಲೂ ಮೇಲು, ಹೊನ್ನಿಗಿಂತಲೂ ಮೇಲು ಎಂಬ ಭಾವನೆ ಮುಗ್ಧ ರೈತನಲ್ಲಿದೆ.

ಮಣ್ಣನ್ನು ನಂಬಿ ನಾ ಮಣ್ಣಿಂದ ಬದುಕೇನು:
ಮಣ್ಣಿನಗೆ ಮುಂದೆ ಹೊನ್ನು: ಅಣ್ಣಯ್ಯ
ಮಣ್ಣೆ ಲೋಕದಲ್ಲಿ ಬೆಲೆಯಾದ್ದು: :

ಲೋಕದಲ್ಲಿ ದೊರೆಯುವ ಎಲ್ಲ ವಸ್ತುಗಳಿಗಿಂತಲೂ ಮಣ್ಣು ಮೇಲು ಎಂದು ಹೇಳುವ ರೈತನಿಗೆ ಭೂಮಿ ದೇವರ ಸ್ಥಾನವನ್ನು ಪಡೆಯುವದರಲ್ಲಿ ಆಶ್ಚರ್ಯವೇಸಿದೆ?

ಆದ್ದರಿಂದ ಜಾನಪದ ಅರ್ಥವ್ಯವಸ್ಥೆಯಲ್ಲಿ ಭೂಮಿಯು ಉತ್ಪಾದನಾ ಘಟಕವಾಗಿರದೇ "ದೇವರು ಉತ್ಪಾದನಾ ಘಟಕ

ಪ್ರತಿಯೊಂದು ಕಾರ್ಯವನ್ನು ಪ್ರಾರಂಭಿಸುವ ಪೂರ್ವದ ನಮ್ಮ ರೈತ ಭಯ ಭಕ್ತಿಗಳಿಂದ ದೇವರ ಆರಾಧನೆಯನ

ಮಾಡಿ ಕಾರ್ಯವು ಸುಗಮವಾಗಿ ಸಾಗಲೆಂದು ಬೇಡಿಕೊಂಡು
ಾರ್ಯವನ್ನು ಪ್ರಾರಂಭಿಸುತ್ತಾನೆ.

ಆಧುನಿಕ ಅರ್ಥಶಾಸ್ತ್ರದ ವಿಶ್ಲೇಷಣೆ ಮೇರೆಗೆ ಹೇಳುವ
ಾದರೆ, ರೈತನ ಮೂಢ ನಂಬಿಕೆ, ಶ್ರದ್ಧೆ, ದೇವರ ಮೇಲೆ
ಾಕುವ ಭಾರ ಇವೇ ಮೊದಲಾದವುಗಳೇ ರೈತನ ಬಡತನಕ್ಕೆ
ಾರಣವಾಗಿವೆ ಎಂದು ಹೇಳಬೇಕಾಗುತ್ತದೆ. ರೈತನಲ್ಲಿರುವ
ಂಬಿಕೆ ಎಂದರೆ ದೇವರೇ ಹುಟ್ಟಿಸುತ್ತಾನೆ, ಬೆಳೆಯಿಸುತ್ತಾನೆ,
ೇವರಿಲ್ಲದೇ ಯಾವುದೂ ಸಾಧ್ಯವಿಲ್ಲ ಎಂಬ ಶ್ರದ್ಧೆ ಅವ
ಾಡುವ ಮಾತುಗಳಿಂದ ತಿಳಿದು ಬರುತ್ತದೆ.

"ಮನುಷ್ಯ ಕೊಟ್ಟಿದ್ದು ಮನೆತನಕ, ದೇವರು ಕೊಟ್ಟಿದ್ದು
ಡೆತನಕ"

ಪರಮಾತ್ಮನು ಕೊಡುವ ಸುಖ ಮನೆಮನೆಗಳನ್ನು
ೆಳಗಬಲ್ಲದು ತಣಿಸಬಲ್ಲದು ಎಂದು ಹೇಳುವ ಜಾನಪದ ವಾಣಿ

ಮಂದೇನು ಕೊಟ್ಟೀತು ಮನವೇನು ದಣಿದೀತು:
ಮುಂಜಾನದಾನ ಗಿರಿಮಲ್ಲ! ಕೊಟ್ಟರ
ಮನಿತುಂಬಿ ನಮ್ಮ ಮನತುಂಬಿ ॥

ಅಂತೆಯೇ ನಮ್ಮ ರೈತ ಸಂಪ್ರದಾಯದ ಸುಳಿಯಲ್ಲಿ
ಯೇ ಸುತ್ತುತ್ತಾನೆ. ಅಭಿವೃದ್ಧಿಯ ಬಗ್ಗೆ ಜ್ಞಾನವಿಲ್ಲ.
ುಧಾರಿಸಿದ ಸಲಕರಣೆಗಳ ಬಳಕೆಯಂತು ಇಲ್ಲವೇ ಇಲ್ಲ.
ಾಸಾಯನಿಕಗಳ ಬಳಿಕೆ ಅವನಿಗೆ ತಿಳಿದಿಲ್ಲ, ಹೀಗಾಗಿ ಆತ
ಡವನಾಗಿಯೇ ಉಳಿದಿದ್ದಾನೆ. ಆದರೆ ಸುಶಿಕ್ಷಿತ, ಸುಧಾರಿ
ದ ಕೆಲವು ಜನ ರೈತರು ಸುಧಾರಿಸಿದ ಸಲಕರಣೆಗಳನ್ನು

ಆದರಲ್ಲಿಯೂ ಮುಖ್ಯವಾಗಿ ಯಂತ್ರೋಪಕರಣಗಳನ್ನು ಮತ್ತು ರಾಸಾಯನಿಕ ವಸ್ತುಗಳಾದ + ರಾಸಾಯನಿಕ ಗೊಬ್ಬರು, ಬೀಜ ಮತ್ತು ಔಷಧಗಳನ್ನು ಸ್ವಲ್ಪ ಮಟ್ಟಿಗೆ ಬಳಸುತ್ತಿದ್ದಾರೆ. ಹೀಗೆ ಪರಿವರ್ತನೆ ಆಗುತ್ತಿರುವದು ಆರ್ಥಿಕಾಭಿವೃದ್ಧಿಗೆ ಉತ್ತಮ ಹಾಗೂ ಅವಶ್ಯಕ.

೨ ಶ್ರಮ. .(**Labour**):— ಶ್ರಮವು ಉತ್ಪಾದನೆಯ ಎರಡನೆಯ ಅಂಗ. ಕಾರ್ಮಿಕರು ತಮ್ಮ ಶ್ರಮವನ್ನು ಉತ್ಪಾದನೆಯಲ್ಲಿ ಬಳಸಿ ಕೂಲಿಯ ರೂಪದಲ್ಲ ಪ್ರತಿಫಲವನ್ನು ಪಡೆಯುತ್ತಾರೆ. ಕಾರ್ಮಿಕರಲ್ಲಿ ಜವಾನನಿಂದ ಹಿಡಿದು ಮಾಲ ಕನ ವರೆಗೆ ವಿವಿಧ ದರ್ಜೆಗಳಿವೆ. ಮಾಲಕನಿಗೆ ಸಂಘಟಕನೆಂದು ಕರೆಯುತ್ತಾರೆ ಇಂದಿನ ಬೃಹತ್ ಪ್ರಮಾಣದ ಉತ್ಪಾದನೆ ಯಲ್ಲಿ ಕಾರ್ಮಿಕ ಮತ್ತು ಒಡೆಯ ಎಂಬ ಎರಡು ವರ್ಗ ಗಳನ್ನು ಕಾಣುತ್ತೇವೆ. ಮೇಲಿಂದ ಮೇಲೆ ಆ ಎರಡೂ ವರ್ಗಗಳಲ್ಲಿ ಕಲಹಗಳು ಉಂಟಾಗುವ ಸಂಪು, ಅಥವಾ ಹೊರಗೀಲಿಗಳ ಸಂಭವವುಂಟು.

ಜಾನಪದ ಸಂಪ್ರದಾಯದ ಉತ್ಪಾದನಾ ಪದ್ಧತಿಯಲ್ಲಿ ನಮ್ಮ ರೈತನೇ ಒಡೆಯ; ಕುಟುಂಬದ ಸದಸ್ಯರೇ ಕಾರ್ಮಿಕರು ಇವರಲ್ಲಿ ಭೇದ-ಭಾವಗಳಿಲ್ಲ, ಕಲಹ, ಸಂಪು ಹಾಗೂ ಹೊರ ಗೀಲಿಗಳ ಸಂಭವವಿಲ್ಲ. ಕಾಯಕದಲ್ಲಿ ಮೇಲು ಕೀಳುಗಳಿಲ್ಲ. ದನಕರುಗಳು ಕಾಲಿನಲ್ಲಿರುವ ಕಸ, ಸೆಗಣಿಯನ್ನು ಆನಂದದಿಂದ ಹಾಗೂ ಕಾರ್ಯ ತತ್ಪರತೆಗಳಿಂದ ಬಳೆಯುತ್ತಾನೆ, ಆದು ಅವನಿಗೆ ಸೆಗಣಿಯಲ್ಲ ಭೂಮಿಬೆಳೆಯಲು ಬಸವ ಕೊಡುವ ಕಸವು ತನ್ನ ಕೂಲಿಗಾಗಿ ಕಾರ್ಯ

...ಳೆಯಲು ಬಸವ ಕೊಡುವ ಕಸವು ರೈತ ತನ್ನ ಕೂಲಿಗಾಗಿ ...ರ್ಯ ನಿರ್ವಹಿಸುತ್ತಿಲ್ಲ ಅದು ಅವನ ಆರಾಧನೆಯಾಗಿದೆ, ...ತೆಯೋ ಅವನಾಡುವ ಮಾತು :

ಕಸವ ಹೊಡೆದಾ ಕೈ ಕಸ್ತೂರಿ ನಾತಾವ :
ಬಸವಣ್ಣ ನಿನ್ನ ಸೆಗಣಿಯು ; ಬಳಿದ ಕೈ
ಎಸಳ ಯಾಲಕ್ಕಿ ಗೊನಿ ನಾತ :

ಕಸವನ್ನು ಗುಡಿಸುವ ಕೈ ಕಸ್ತೂರಿಯ ವಾಸನೆಯನ್ನು ...ಸವಣ್ಣನ ಸೆಗಣಿಯನ್ನು ಬಳೆದ ಕೈ ಎಸಳ ಯಾಲಕ್ಕಿ ವಾಸನೆ ...ರುತ್ತದೆ ಎಂಬುದೇ ರೈತನ ಶ್ರದ್ಧೆಯಾಗಿದೆ. ಇದೇ ಕಾರ್ಯ ...ನ್ನು ಶ್ರದ್ಧೆಯಿಂದ ಮಾಡುತ್ತಿರುವ ಹೆಣ್ಣನ್ನು ಕುರಿತು ವಿವರಿ...ದ ಜಾನಪದ ವಾಣಿ ಇಂತಿದೆ.

ಕಸವ ಗೂಡಿಸುವ ಹೆಣ್ಣೆ ಹಸನಾಯ್ತು ನಿನ್ನಟ್ಟ:
ಹಸುಗೂಸಿನ್ಹಾಂಗ ನಿನ ತಿಪ್ಪಿ: ದಿನದಿನಕ
ಬೆಳೆದು ಬಂಗಾರ ತರತಾವೋ ::

ಸೆಗಣಿಯು ಗೊಬ್ಬರ ಸುವರ್ಣ ಸಮಾನ, ಎಳೆಯು ಮಗು ...ನಿಯು ಸೊಗಸನ್ನು ಉಕ್ಕಿಸುತ್ತ ಬೆಳೆಯುವಂತೆ ದಿನದಿನಕ ...ಳೆಯುವ ಗೊಬ್ಬರದ ತಿಪ್ಪಿ ಭೂದೇವಿಯು ಬೆಳೆಯುವ ಶಕ್ತಿ...ಯನ್ನು ಉಕ್ಕಿಸುತ್ತಾ ಸುಗ್ಗಿ ಸೂರೆಗೊಳ್ಳುವಂತೆ ಮಾಡುವದು. ...ತನಮನೆಗೆ ಬಂಗಾರವನ್ನು ತಂದು ತುಂಬುವದು.

ಇಂದಿನ ಒಕ್ಕಲುತನದ ಪದ್ಧತಿಯೋ ಬೇರೆ ಒಕ್ಕಲುತನ...ಲ್ಲಿ ರೈತರ ಹಾಗೂ ಕಾರ್ಮಿಕರ ಶ್ರದ್ಧೆ ಮೊದಲಿನಷ್ಟಿಲ್ಲ.

ಇಂದು ತಿಪ್ಪಿ ಗೊಬ್ಬರದ ಕೊರತೆಯಾಗಿದೆ. ರಾಸಾಯನಿಕ ಗೊಬ್ಬರದ ಬಳಕೆ ಹೆಚ್ಚುತ್ತಲಿದೆ. ಯಂತ್ರೋಪಕರಣಗಳ ಬಳಕೆ ಹೆಚ್ಚುತ್ತಿದೆ. ಹೀಗಾಗಿ ಒಕ್ಕಲುತನ ಇಂದು ಬಾಳಿನ ದಾರಿ (Way of life) ಆಗಿರದೆ ಸಂಘಟಿಸಲ್ಪಟ್ಟ ಆರ್ಥಿಕ ರಂಗವಾಗಿದೆ. (Organised Economic Sector),

ರೈತ ಭೂ ತಾಯಿಯ ಮಡಿಲಲ್ಲಿ ಹೇಗೆ ಶ್ರದ್ಧೆಯಿಂದ ದುಡಿಯುವನೋ ಹಾಗೇ ಇನ್ನುಳಿದ ಜಾನಪದ ಕಸಬುದಾರರಾದ ಬಡಿಗ, ಕಮ್ಮಾರ, ಹಡಪಿಗ, ಅಗಸ, ಚಮ್ಮಾರ, ಅಂಬಿಗ, ಸಿಂಪಿ, ಸಮಗಾರ, ಹೊಲೆಯ, ಕುಂಬಾರ, ಕೊರವ, ಗೊರವ, ಇವರೆಲ್ಲರೂ ಸಹಕಾರದಿಂದ ತಮ್ಮ ತಮ್ಮ ಕಾರ್ಯಗಳನ್ನು ಕಾರ್ಯದಕ್ಷತೆಯಿಂದ ನಿರ್ವಹಿಸುತ್ತಿದ್ದರು. ಜಾನಪದ ಜೀವನದಿಂದ ಕಂಡು ಬರುತ್ತದೆ.

ಪ್ರತಿಯೊಬ್ಬನು ತನ್ನ ಉದರ ಪೋಷಣೆಗಾಗಿ ದುಡಿಯಲೇಬೇಕು. ಇದು ಆದಿಕಾಲದಿಂದಲೂ ಬಂದಿದೆ. ಅಂತೆಯೇ ಜಾನಪದರು "ದುಡಿತವೇ ದುಡ್ಡಿನ ತಾಯಿ" ಎಂದು ಹೇಳಿಲ್ಲವೇ ? ದುಡಿಮೆ ದುಡ್ಡನ್ನು ಹುಟ್ಟಿಸುತ್ತದೆ. ಅ ದುಡ್ಡಿನಿಂದ ತನಗೆ ಬೇಕಾದ ವಸ್ತುಗಳನ್ನು ಪಡೆದು ತನ್ನ ಬಯಕೆಗಳನ್ನು ತೃಪ್ತಿ ಪಡಿಸಿಕೊಳ್ಳಬಲ್ಲ. ಆದ್ದರಿಂದ "ಆಳಾಗಿ ದುಡಿ ಅರಸಾಗಿ ಉಣ್ಣು" ಎಂದಿದ್ದಾರೆ. ದುಡಿಮೆಯ ಪ್ರತಿಫಲವನ್ನು ಜಾನಪದರು ವಿವರಿಸುತ್ತಾ 'ಕೈ ಕೆಸರಾದರೆ ಬಾಯಿ ಮೊಸರು.' ಎಂದು ಸುಂದರವಾಗಿ ಹೇಳಿದ್ದಾರೆ. ಹಸಿವನ್ನು ಹಿಂಗಿಸಬೇಕಾದರೆ ದುಡಿಮೆ ಅನಿವಾರ್ಯ. ಅಂ

ೀ ಜಾನಪದ ಸಂಪ್ರದಾಯದಲ್ಲಿ ಜೀವನೋಪಾಯಕ್ಕಾಗಿ ೀ ಕೆಲವೊಂದು ಜಾನಪದ ಕಲೆಗಳನ್ನು ಕಾಣುತ್ತೇವೆ. ವು ಎಂದರೆ ವೇಷಗಾರರು, ಕವಲೆತ್ತು, ಸಾರುವ ಅಯ್ಯ ವರು, ಕರಪಾಲದವರು, ಪಗ್ಗಯ್ಯಗಳು, ಗೊಂದಲಿಗರು, ಡಿಬುಡಿಕೆ, ಸುಡಗಾಡ ಸಿದ್ಧರು, ಹೆಳವರು, ಕಿಳ್ಳೆಕೇತರು, ಂಬರು, ಹಾವುಗಾರರು ಇನ್ನಿತರರು. ಇವರು ತಮ್ಮ ದರಂಭರಣೆಗಾಗಿಯೇ ಈ ಕಲೆಗಳನ್ನು ಪ್ರಾರಂಭಿಸಿದ್ದು, ವು ಅವರ ಕುಲ ಕಸುಬುಗಳಾಗಿ ಪರಿವರ್ತನೆಗೊಂಡಿವೆ.

ಬಂಡವಾಳ;—(Capital):—ಬಂಡವಾಳ ಉತ್ಪಾದನೆಯ ೂರನೆಯ ಅಂಗ. ಇಲ್ಲಿ ಬಂಡವಾಳಕ್ಕೆ ವಿಶಾಲವಾದ ರ್ಥವಿದೆ. ಅದು ಕೇವಲ ಹಣ ಅಲ್ಲ ಬಂಡವಾಳ ಅಂದರೆ ತ್ಪಾದಿಸಲ್ಪಟ್ಟ ಉತ್ಪಾದನಾ ಸಾಧನ, (produced eans of production) ಇದರಲ್ಲಿ ಯಂತ್ರೋಪಕರಣಗಳು ರಿಗೆ ಸಾಧನಗಳು, ಇನ್ನಿತರ ಉತ್ಪಾದನೆಗೆ ಸಹಾಯವಾಗುವ ತ್ಪಾದಿಸಿದ ಸಾಧನಗಳೊಳಗೊಳ್ಳುತ್ತವೆ. ಇಂದಿನ ಆರ್ಥಿಕ ವಸ್ಥೆಯಲ್ಲಿ ಬಂಡವಾಳವು ಮಹತ್ವದ ಸ್ಥಾನವನ್ನು ಪಡೆ, ದೆ. ಬಂಡವಾಳವಿಲ್ಲದೆ ಯಾವ ಉತ್ಪಾದನೆಯು ಸಾಧ್ಯವಿಲ್ಲ. ಬೃಹತ್ ಉತ್ಪಾದನಾ ಪದ್ಧತಿಯಲ್ಲಿ ಪ್ರತಿಯೊಂದು ಸ್ತು ಬಂಡವಾಳದಿಂದ ನಿರ್ಮಿತವಾಗುತ್ತದೆ. ಬಂಡವಾಳದ ರತೆಯಿಂದಾಗಿಯೇ ಪ್ರಪಂಚದ ಎಷ್ಟೋ ರಾಷ್ಟ್ರಗಳು ಬಡ ರಾಷ್ಟ್ರಗಳಾಗಿವೆ.

ಬಂಡವಾಳದ ಸಂಗ್ರಹಣೆಗೆ ಉಳಿತಾಯ ಮುಖ್ಯ. ದಿನ ಉದ್ದಿಮೆದಾರರು ಬಂಡವಾಳ ವಿನಿಯೋಗಕ್ಕಾಗಿ

ಹಲವು ರೀತಿಯಿಂದ ಹಣವನ್ನು ಸಂಗ್ರಹಿಸುತ್ತಾರೆ. ಬಂಡವಾಳ ವಿನಿಯೋಗದಲ್ಲಿ ಬ್ಯಾಂಕುಗಳಾಡುವ ಪಾತ್ರ ಅಷ್ಟಿಷ್ಟಲ್ಲ. ವಿಶ್ವ ಬ್ಯಾಂಕು ಕೂಡ ಬಂಡವಾಳ ವಿನಿಯೋಗಕ್ಕೆ ಆರ್ಥಿಕ ನೆರವನ್ನು ಒದಗಿಸುತ್ತದೆ. ಇಂತಹ ಸಂಸ್ಥೆಗಳಿಂದ ಪಡೆದು ಕೊಂಡಂಥ ಸಾಲ ಭಾರವೆನಿಸುವದಿಲ್ಲ. ಸುಲಭವಾಗಿ ಹಿಂದಿರುಗಿಸುವ ಸಾಧ್ಯತೆ ಉಂಟು.

ಬೃಹತ್ ಉದ್ದಿಮೆಗಳೇಕೆ? ಇಂದು ನಾವು ಕೃಷಿರಂಗವನ್ನು ತೆಗೆದುಕೊಂಡರೂ ಕೂಡ ನಮ್ಮ ಒಕ್ಕಲುತನದಲ್ಲಿ ಬಂಡವಾಳದ ಪಾತ್ರ ಹಿರಿದಾಗಿದೆ. ವೈಜ್ಞಾನಿಕ ಸಲಕರಣೆಗಳಾದಂಥ ಟ್ರ್ಯಾಕ್ಟರ, ಪೈರು ಕೊಯ್ಯುವ ಯಂತ್ರ, ರಾಶಿ ಮಾಡುವ ಯಂತ್ರ, ನೀರು ಮೇಲೆತ್ತುವ ಪಿಟರ ಅಥವಾ ಮೋಟಾರ ಇನ್ನಿತರ ಯಂತ್ರೋಪಕರಣಗಳ ಬಳಕೆ ಹೆಚ್ಚುತ್ತಿದೆ. ಆದ್ದರಿಂದ ಇಂದಿನ ಒಕ್ಕಲುತನವು ಯಾಂತ್ರೀಕಕೃತ ಒಕ್ಕಲುತನ (mechanised agriculture)ವಾಗಿ ಪರಿವರ್ತನೆಗೊಳ್ಳುತ್ತಿದೆ.

ನಮ್ಮ ಜಾನಪದ ಕೃಷಿ ಸಂಪ್ರದಾಯದಲ್ಲಿ ಬಂಡವಾಳದ ಪಾತ್ರ ಕಡಿಮೆ. ಹಳ್ಳಿಗಾಡಿನ ರೈತನಿಗೆ ಯಂತ್ರೋಪಕರಣಗಳ ಬಳಕೆ ತಿಳಿದಿಲ್ಲ. ಅವರ ಬಂಡವಾಳವೆಂದರೆ ಸುಲಭ ಹಾಗೂ ಸರಳ ಸಲಕರಣೆಗಳು. ಕಟ್ಟಿಗೆಯಿಂದ ಮಾಡಿದ ಕೂರಿಗೆ, ಕುಂಟೆ, ರೆಂಟೆ, ಚರ್ಮದ ಮೋಟೆ, ಕಬ್ಬಿಣದ ಮೋಟೆ, ಕುಪ್ಪಿ, ಕುಡಗೋಲು, ಗುದ್ದಲಿ, ಸಲಿಕೆ, ಕೊಡ್ಲಿ, ಕುಡ, ನೇಗಿಲು, ಚಕ್ಕಡಿ, ಇತ್ಯಾದಿಗಳು. ಈ ಉಪಕರಣಗಳ

ನಮ್ಮ ರೈತನಿಗೆ ಪೂಜನೀಯ. ರೈತನ ಉತ್ಪನ್ನವು ಕಡಿಮೆ; ಉಳಿತಾಯವು ಕಡಿಮೆ. ಹೀಗಾಗಿ ಬಂಡವಾಳದ ಸಂಗ್ರಹ ಇಲ್ಲ. ಆರ್ಥಿಕ ನೆರವು ನೀಡಲು ಬ್ಯಾಂಕುಗಳಂಥ ಸಂಸ್ಥೆಗಳು ಇರಲಿಲ್ಲ. ಹಳ್ಳಿಯ ಸಾವುಕಾರರು ಒದಗಿಸುವ ಸಾಲವೇ ರೈತನಿಗೆ ದಾರಿ. ಹೀಗಾಗಿ ನಮ್ಮ ಸಮಾಜ ಋಣಭಾರದ ಕ್ರೂರ ಪರಿಣಾಮಗಳನ್ನು ಪುರಾತನ ಕಾಲದಿಂದಲೂ ಕಂಡಿದೆ. ಸಾಲಗಾರರು ಹಣವಂತರಿಂದ ನರಕೀಯವಾದ ನಷ್ಟ, ಕಷ್ಟ ಹಾಗೂ ಯಾತನೆಗಳಿಗೆ ಗುರಿಯಾಗಿದ್ದಾರೆ. ಸುಲಿಗೆಯೇ ಹಣವಂತರ ಕರ್ಮ ಎನ್ನುವ ಸತ್ಯವನ್ನು ಪುರಾತನರು ವಿವಿಧ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ.

ಅಂತೆಯೇ ನಮ್ಮ ರೈತ ಸಾಲದಲ್ಲಿ ಹುಟ್ಟಿ ಸಾಲದಲ್ಲಿ ಬೆಳೆದು ಸಾಲದಲ್ಲಿಯೇ ಮರಣ ಯಾತ್ರೆಯನ್ನು ಕೈಕೊಳ್ಳುತ್ತಾನೆ. (Indian farmer born in debt, lives in debt and dies in debt). ಅಪ್ಪನ ಸಾಲಕ್ಕೆ ಮಕ್ಕಳು ವಾರಸುದಾರರು. ತಂದೆ ಸಾಯುವಾಗ ಮಗನಿಗೆ ಬಿಟ್ಟು ಹೋಗುವ ಮಹದಾಸ್ತಿ ಎಂದರೆ ಸಾಲ. ಸಾಲ ಮಾಡುವಾಗ ಹಾಲು ಕುಡಿದಂತೆ, ಸಾಲಗಾರ ಮನೆಯ ಮುಂದೆ ನಿಂತಾಗ ಕಿಬ್ಬದಿಯ ಕೀಲು ಮುರಿದಂತೆ ಎಂದು ಸರ್ವಜ್ಞ ಹೇಳಿಲ್ಲವೇ?

ಅದೇ ರೀತಿ ನಮ್ಮ ಜಾನಪದರು ಸಾಲ ಒಳ್ಳೆಯದಲ್ಲ, ಸಾಲ ಹತ್ತು ಜನರೆದುರು ಮಾನ ಕಳೆಯುತ್ತದೆ. ಎಂದು ಹೇಳಿದ್ದಾರೆ. ಸಾಲ ಮಾಡಿದವನ ಗೋಳು ಏನಾಗುತ್ತಿದೆ ಎಂಬುದನ್ನು ಜಾನಪದರು ತ್ರಿಪದಿಯಲ್ಲಿ ಸುಂದರವಾಗಿ ವಿವರಿಸಿದ್ದಾರೆ.

ಸರಿಗೆ ಪಂಚೆಯನ್ನುಟ್ಟು ಬೆರಳಿಗುಂಗುರವಿಟ್ಟು :
ಸರಿಯುವರ ಕೂಡ ಬರುವಾಗ: ಸಾಲಗಾರ
ಸೆರಗ್ಹಿಡಿದು ನಿಲ್ಲಿಸಿ ಬಿಡುವನು ::

ನಂತರ ಮದುವೆಯ ಸಂಬಂಧದಲ್ಲಿ ಹೋಗುತ್ತಿದ್ದಾಗಲೂ ಸಾಲಗಾರರು ಸೆರಗಿಡಿದು ನಿಲ್ಲಿಸಲು ಹಿಂಜರಿಯರು. ನಂತರ ಮುಂದೆ ಸಾಲ ಮಾಡಿದವನ ಮಾನ ಉಳಿಯುವದೇ? ಇದು ಹೀಗಾಗಕೂಡದು, ಮಗ ಸಾಲದಿಂದ ಮುಕ್ತನಾಗಬೇಕು ಎಂಬುದೇ ಜಾನಪದ ಗೀತೆಯ ಕೂಗು.

ಸಾಲಮಾಡಿದವನ ಸ್ಥಿತಿ ಏನಾಗುತ್ತದೆ ಎಂಬುದು ಜಾನಪದರು ಗಾದೆಗಳಲ್ಲಿ ಸುಂದರವಾಗಿ ಹಿಡಿದಿಟ್ಟಿದ್ದಾರೆ.

" ಸಾಲಗಾರನ ಮನೆಗೆ ಸವುದೆ ಹೊತ್ತರೆ ಮೇಲಿನ ಬಡ್ಡಿಗೆ ಸಮನಾಯ್ತು"

" ಸಾಲ ಮಾಡಿ ಓಲಿ ಮಾಡಿದ, ಓಲಿ ಮಾರಿ ಬಡ್ಡಿ ತೀರಿಸಿದ"

" ಕಡ ಹುಟ್ಟಿ ಬಡವ ಕೆಟ್ಟ"

" ಹಂಗಿನ ಹಾಲಿಗಿಂತ ಅಂಬಲಿಯು ತಿಳಿ ಲೇಸು"

ಇಂಥಹ ನಿತ್ಯಾನುಭವದ ಗಾದೆಗಳು ಎಚ್ಚರತಪ್ಪಿದ ಜನರನ್ನು ಎಬ್ಬಿಸುತ್ತವೆ. ಮಾನವನ ದುಃಖಕ್ಕೆ ಆಶೆಯೇ ಕಾರಣವೆಂದು ಬುದ್ಧ ಬೋಧಿಸಿದ್ದುಂಟು. ಅಂದರೆ ಆಶೆ ಇರಬಾರದೆಂದಲ್ಲ. ಎಷ್ಟು ಬೇಕೋ ಅಷ್ಟು ಇದ್ದರೆ ತೃಪ್ತಿಯಾಗುತ್ತದೆ. ತೃಪ್ತಿಯಿಂದ ಮನಶ್ಯಾಂತಿ, ಮನಶ್ಯಾಂತಿಯಿಂದ ಸುಖ ಲಭಿಸುತ್ತವೆ. ಅಂತೆಯೇ "ಗಳಿಕೆ ನೋಡಿ ಬಳಕೆ ಮಾಡು"

"ಹಾಸಿಗೆ ಇದ್ದಷ್ಟು ಕಾಲು ಚಾಚು" ಎಂದಿಲ್ಲವೇ?

ಸಾಲಮಾಡುವದು ಎಷ್ಟು ಕೆಟ್ಟದ್ದೋ, ಸಾಲ ಕೊಡುವದು ಅಷ್ಟೇ ಕೆಟ್ಟದ್ದು ಎಂದು ನಮ್ಮ ಜಾನಪದರ ಅಭಿಮತ. ಏಕೆಂದರೆ ಸಾಲಕೊಟ್ಟವರು ಸಾಲ ತೆಗೆದು ಕೊಂಡವರ ಮನೆ ಮನೆಗೆ ತಿರುಗಾಡಿ ಸಾಲವಸೂಲು ಮಾಡಬೇಕಾಗುತ್ತದೆ. ಇದರಿಂದ ಸಾಲಕೊಟ್ಟವನ ವೇಳೆ ಹಾಗೂ ಶಕ್ತಿ ನಾಶವಾಗುತ್ತದೆ. ಸಾಲ ತೆಗೆದುಕೊಂಡಷ್ಟು ಸುಲಭವಾಗಿ ಸಾಲ ತಿರುಗಿಸಿದರೆ ಉತ್ತಮ. ಎಷ್ಟೋ ಸಲ ಸಾಲ ಮುಳುಗುವ ಸಂಭವವುಂಟು. ಆದ್ದರಿಂದಲೇ ಜಾನಪದರು —

"ಕೊಟ್ಟು ಪೇಚಾಡುವವಕಿಂತ ಇಟ್ಟುಕೊಳ್ಳುವವನು ಉತ್ತಮ" ಎಂದು ಹೇಳಿದ್ದಾರೆ. ಎಷ್ಟೋ ಸಲ ಸಾಲಗಾರ ಸಾಲ ತೆಗೆದುಕೊಂಡವನೊಂದಿಗೆ ಜಗಳವಾಡಬೇಕಾಗುತ್ತದೆ. ಆಗ ಸಾಲ ಪಡೆದುಕೊಂಡಾತ ವೀರಭದ್ರಾವತಾರ ತಾಳುವದರಲ್ಲಿ ಸಂದೇಹವಿಲ್ಲ. ಆದ್ದರಿಂದ ಜಾನಪದರು—

"ಕೊಟ್ಟವ ಕೋಡಂಗಿ ಇಟುಕೊಂಡಾತ ವೀರಭದ್ರ" ಎಂದು ಸುಂದರವಾಗಿ ವಿವರಿಸಿದ್ದಾರೆ.

ಸಾಲಗಾರನ ಮನೆಗೆ ತನ್ನನ್ನು ಕೊಡಬೇಡ ಎಂದು ಕಳಕಳಿಯಿಂದ ತನ್ನ ತಾಯಿಯನ್ನು ಕೇಳುವ ಒಬ್ಬ ಹೆಣ್ಣು ಮಗಳ ವ್ಯಥೆಯನ್ನು ಇಲ್ಲಿ ಗಮನಿಸಬಹುದು.

"ವರಗೇಡಿ ಮನೆತನಕ ಕೊಡಬೇಡ ಹಡೆದವ್ವ :
ವರ ನೋಡ : ವರನ ಗುಣ ನೋಡ ಮನಿಯಾನ
ಸಾಸಿವಿಕಾಳಷ್ಟು ಋಣನೋಡ :

೪) **ಸಂಘಟನೆ ; (Organissation):** ಉತ್ಪಾದನೆಯ ಮತ್ತೊಂದು ಮುಖ್ಯವಾದ ಘಟಕ ಸಂಘಟನೆ. ಭೂಮಿ, ಶ್ರಮ ಮತ್ತು ಬಂಡವಾಳ, ಇವುಗಳನ್ನು ಒಂದೆಡೆ ಸೇರಿಸಿ, ಸರಿಯಾದ ಪ್ರಮಾಣದಲ್ಲಿ ಸಂಯೋಜಿಸುವದಕ್ಕೆ ಸಂಘಟನೆ ಎಂದು ಕರಿಯುತ್ತಾರೆ. ಈ ಮೂಲಕ ಸಂಘಟನೆಯನ್ನು ಮಾಡುವವರಿಗೆ ಸಂಘಟಕನೆಂದು (Organisor) ಇಲ್ಲವೇ ಉದ್ದಿಮೆ ಸಾಹಸಿಗಳೆಂದು ಕರಿಯುತ್ತಾರೆ.

ಆಧುನಿಕ ಅರ್ಥಶಾಸ್ತ್ರದಲ್ಲಿ ಸಂಘಟನಾಕಾರನ ಕಾರ್ಯ ವ್ಯಾಪ್ತಿ ಹೆಚ್ಚಿರುತ್ತದೆ. ಮತ್ತು ಕಾರ್ಯದ ರೂಪ ಸಂಕೀರ್ಣ ವಾಗಿರುತ್ತದೆ. ವಿವಿಧ ಉತ್ಪಾದನಾಂಗಗಳು ಬೇರೆ ಬೇರೆ ಸ್ಥಳಗಳಲ್ಲಿರುವದರಿಂದ ಮತ್ತು ಬೇರೆಯವರ ಒಡೆತನದಲ್ಲಿರು ವುದರಿಂದ ಅವುಗಳನ್ನು ದೊರಕಿಸಿ ಒಂದೆಡೆ ಸೇರಿಸಿ ಯೋಗ್ಯ ಪ್ರಮಾಣದಲ್ಲಿ ಸಂಯೋಜಿಸಿ ಉತ್ಪಾದನೆಯನ್ನು ಕೈ ಕೊಳ್ಳ ಬೇಕಾಗುತ್ತದೆ. ಅಷ್ಟೇ ಅಲ್ಲದೇ ಉತ್ಪಾದನೆಯ ಮೇಲ್ವಿ ಚಾರಣೆ, ತಯಾರಿಸಿದ ವಸ್ತುಗಳ ಮಾರಾಟ, ಹೊಸ ಹೊಸ ಉತ್ಪಾದನಾ ವಿಧಾನಗಳನ್ನು ಕಂಡುಹಿಡಿದು ಉತ್ಪಾದನಾ ವೆಚ್ಚವನ್ನು ತಗ್ಗಿಸುವದು, ವಸ್ತುಗಳ ಗುಣಮಟ್ಟವನ್ನು ಸುಧಾ ರಿಸುವದು. ಇವೇ ಮೊದಲಾದವುಗಳು ಸಂಘಟನಾಕಾರನು ನಿರ್ವಹಿಸುವ ಕಾರ್ಯಗಳಾಗಿವೆ.

ಜಾನಪದ ಸಂಪ್ರದಾಯದ ಉತ್ಪಾದನಾ ಪದ್ಧತಿಯಲ್ಲಿ ಸಂಘಟಕನ ಪಾತ್ರ ಸರಳವಾಗಿದೆ. ಮತ್ತು ಕುಟುಂಬಕ್ಕೆ ಸೀಮಿ ತವಾಗಿದೆ. ಮನೆಯ ಮುಖಂಡನೇ ಉತ್ಪಾದನೆಯ ಸಂಘ

ಟಕನಾಗಿ ಕಾರ್ಯನಿರ್ವಹಿಸುತ್ತಾನೆ. ಉತ್ಪಾದನೆಗೆ ಬೇಕಾಗುವ ಸಲಕರಣೆಗಳು ಹೆಚ್ಚಿನ ಪ್ರಮಾಣದಲ್ಲಿ ತಮ್ಮ ಸ್ವಂತ ಸಲಕರಣೆಗಳೇ ಆಗಿರುತ್ತವೆ. ರೈತನಿಗೆ ಬೇಕಾಗುವ ಭೂಮಿ ಅವನೇ ಅಥವಾ ಬೇರೆಯವರಿಂದ ಪಾಲಿನಿಂದ ಪಡೆದಿರುತ್ತಾನೆ. ಬೇಕಾಗುವ ಕಾರ್ಮಿಕರು ಅವನ ಕುಟುಂಬದ ಸದಸ್ಯರು. ಅತೀ ಅವಶ್ಯವೆನಿಸಿದರೆ ಕೂಲಿ ಆಳುಗಳನ್ನು ಪಡೆಯುತ್ತಾನೆ. ಬೇಕಾಗುವ ಬಂಢವಾಳ ಅವನ ದನಕರುಗಳು, ಕಟ್ಟಿಗೆ ಹಾಗೂ ಕಬ್ಬಿಣದಿಂದ ತಯಾರಿಸಿದ ಸರಳ ಹಾಗೂ ಸುಲಭ ಸಲಕರಣೆಗಳು. ಕಡಿಮೆ ಬಿದ್ದಾಗ ಬೇರೆಯವರ ಕಡೆಯಿಂದ ಮುಯ್ಯ ರೂಪದಲ್ಲಿ ಪಡೆಯುತ್ತಾನೆ,

ಈ ಉತ್ಪಾದನಾ ಕ್ರಿಯೆಯಲ್ಲಿ ರೈತನು ಹಳ್ಳಿಯ ಆಯಗಾರರ ಸಹಾಯವನ್ನು ಯಾಚಿಸುತ್ತಾನೆ. ಅವರ ಸಹಾಯದ ಪ್ರತಿಫಲವೆಂದು ಅವರಿಗೆ ದವಸ ಧಾನ್ಯಗಳನ್ನು ಒದಗಿಸುತ್ತಾನೆ. ಹೀಗೆ ಹಳ್ಳಿಯ ರೈತನ ಸಂಘಟನೆ ಸುಲಭವಾದುದು.

ರೈತನ ಹಾಗೆಯೇ ಹಳ್ಳಿಯ ವ್ಯಾಪಾರಸ್ಥರ, ಕೃಷಿ ಕಾರ್ಮಿಕರ. ಕಸಬುದಾರರಾದ ಬಡಿಗ, ಕಮ್ಮಾರ, ಕುಂಬಾರ, ಹಡಪಿಗ, ಸಿಂಪಿ, ಕೊರವ, ಗೊರವ, ಚಮ್ಮಾರ, ಮೊದಲಾದವರ ಸಂಘಟನೆಯೂ ಕೂಡ ಬಹು ಸುಲಭವಾದುದು.

ಜಾನಪದ ಅರ್ಥವ್ಯವಸ್ಥೆಯಲ್ಲಿ ಸಂಘಟಕನ ಪಾತ್ರ ಎಷ್ಟು ಹಿರಿಮೆಯದಾದುದು ಎಂಬುದನ್ನು ಕೆಳಗಿನ ಗಾದೆಯಿಂದ ತಿಳಿದುಕೊಳ್ಳಬಹುದು. "ಗುರು ಇಲ್ಲದ ಮಠ ಅಲ್ಲ, ಹಿರ್ಯಾ ಇಲ್ಲದ ಮನಿಅಲ್ಲ."

## ೪. ಶ್ರಮ ವಿಭಜನೆ (Division of Labour)

ಉತ್ಪಾದನಾ ಪದ್ಧತಿಯಲ್ಲಿ ಶ್ರಮವಿಭಜನೆಯು ವ್ಯಾಪಕವಾಗಿ ಕಂಡುಬರುತ್ತದೆ. ಮಾನವನ ಬಯಕೆಗಳು ಅಪರಿಮಿತವಾಗಿವೆ. ಅವುಗಳ ಈಡೇರಿಕೆಗಾಗಿ ತಾನು ಇತರರನ್ನು ಅವಲಂಬಿಸಬೇಕಾಗುತ್ತದೆ. ತಾನು ತಯಾರಿಸಿದ ವಸ್ತುಗಳನ್ನು ತಾನೊಬ್ಬನೇ ಉಪಭೋಗಿಸುವದಿಲ್ಲ. ಮತ್ತು ತಾನು ಉಪಭೋಗಿಸುವ ವಸ್ತುಗಳನ್ನು ತಾನೊಬ್ಬನೇ ಉತ್ಪಾದಿಸುವದಿಲ್ಲ. ತಾನು ತಯಾರಿಸಿದ ವಸ್ತುಗಳನ್ನು ಇತರರಿಗೆ ಕೊಟ್ಟು, ಇತರರಿಂದ ಅವರು ತಯಾರಿಸಿದ ವಸ್ತುಗಳನ್ನು ಪಡೆಯುವದರ ಮೂಲಕ ಶ್ರಮ ವಿಭಜನೆಯ ಲಾಭವನ್ನು ಪಡೆಯುವನು.

ಶ್ರಮ ವಿಭಜನೆ ಎಂದರೆ ಕೆಲಸವನ್ನು ಹಂಚಿಕೊಂಡು ಮಾಡುವದು. ಇಂದಿನ ಯಾಂತ್ರೀಕೃತ, ಬೃಹತ್, ಉತ್ಪಾದನಾ ಪದ್ಧತಿಯಲ್ಲಿ ಸಂಕೀರ್ಣಮಯವಾದ ಶ್ರಮವಿಭಜನೆಯನ್ನು ನಾವು ಕಾಣುತ್ತೇವೆ. ಇಲ್ಲಿ ಒಂದು ವಸ್ತುವನ್ನು ಒಬ್ಬನೇ ಉತ್ಪಾದಿಸಿದಾಗ. ಶ್ರಮ ವಿಭಜನೆಯಾಗುವದಿಲ್ಲ. ಉದಾಹರಣೆಗಾಗಿ, ಒಬ್ಬ ಸಿಂಪಿಗ ಒಂದು ಶರ್ಟನ್ನು ಪೂರ್ಣವಾಗಿ ತಾನೊಬ್ಬನೇ ತಯಾರಿಸಿದಾಗ, ಅದು ಶ್ರಮ ವಿಭಜನೆಯಾಗುವದಿಲ್ಲ, ಆ ಅಂಗಿಯ ವಿವಿಧ ಭಾಗಗಳನ್ನು ವಿವಿಧ ಕಾರ್ಮಿಕರು ತಯಾರಿಸಿದರೆ ಅದು ಶ್ರಮ ವಿಭಜನೆಯಾಗುತ್ತದೆ. ಕೆಲವರು ಕೇವಲ ಬಟ್ಟೆಯನ್ನು ಕತ್ತರಿಸುವದು ಕೆಲವರು ಕೇವಲ ತೋಳುಗಳನ್ನು ತಯಾರಿಸುವದು, ಕೆಲವರು

ಕೇವಲ ಕಾಲರುಗಳನ್ನು ತಯಾರಿಸುವದು, ಕೆಲವರು ಅವುಗಳನ್ನು ಜೋಡಿಸಿ ಹೊಲಿಯುವದು ಮತ್ತೆ ಕೆಲವರು ಗುಂಡಿ ಹಚ್ಚುವದು, ಪ್ಯಾಕು ಮಾಡುವದು ಇವೇ ಮೊದಲಾದ ಕೆಲಸಗಳನ್ನು ಹಂಚಿಕೊಂಡು ಮಾಡುತ್ತಾರೆ. ಹೀಗೆ ಒಂದೇ ಕೆಲಸವನ್ನು ಅನೇಕ ಜನರಲ್ಲಿ ಹಂಚಿ ಅವರಿಂದ ಕೆಲಸ ತೆಗೆದು ಕೊಂಡಾಗ ಉತ್ಪಾದನೆ ಬಹಳಷ್ಟು ಹೆಚ್ಚಾಗುತ್ತದೆ.

ಈ ಶ್ರಮ ವಿಭಜನೆಯಿಂದ ಹಲವಾರು ಲಾಭಗಳುಂಟು ಶ್ರಮ ವಿಭಜನೆಯಿಂದ ಉತ್ಪಾದನೆ ಹೆಚ್ಚಾಗುತ್ತದೆ. ಪದೇ ಪದೇ ಅದೇ ಕೆಲಸವನ್ನು ನಿರ್ವಹಿಸುವದರಿಂದ ಕಾರ್ಮಿಕರ ಕಾರ್ಯ ದಕ್ಷತೆ ಮತ್ತು ಕಾರ್ಯ ನಿರ್ವಹಿಸುವ ಕುಶಲತೆ ಹೆಚ್ಚುತ್ತದೆ. ಸಮಯದ ಉಳಿತಾಯವಾಗುತ್ತದೆ. ಬೃಹತ್ ಪ್ರಮಾಣದ ಉತ್ಪಾದನೆ ಪ್ರಯೋಗ ಹಾಗೂ ಸಂಶೋಧನೆಗಳಿಗೆ ಆಸ್ಪದ ದೊರೆಯುತ್ತದೆ. ಇವೆಲ್ಲವುಗಳಿಗಾಗಿ ಉತ್ಪಾದನೆಯು ಹಲವಾರು ಪಟ್ಟು ಹೆಚ್ಚುತ್ತದೆ.

ಶ್ರಮ ವಿಭಜನೆಯು ಯಾಂತ್ರಿಕ ಉತ್ಪಾದನೆಯ ಕೊಡುಗೆಯಾದರೂ ಕೂಡ ಅದರ ಸುಸಜ್ಜಿತವಾದ ಪದ್ಧತಿಯನ್ನು ನಾವು ಅನಾದಿ ಕಾಲದಿಂದಲೂ ಜಾನಪದದಲ್ಲಿ ಕಾಣುತ್ತೇವೆ. ಆದರೆ ಇಂದಿನ ಪದ್ಧತಿಯಲ್ಲಿ ಕಾಣುವ ಸಂಕೀರ್ಣಮಯವಾದ ಶ್ರಮವಿಭಜನೆ ಅಲ್ಲಿಲ್ಲ. ಒಂದೇ ಕೆಲಸವನ್ನು ಹಲವಾರು ಜನರಲ್ಲಿ ಹಂಚುವ ಬದಲು ಒಂದೊಂದು ಕೆಲಸವನ್ನು ಒಬ್ಬೊಬ್ಬರು ಹಂಚಿಕೊಂಡು ಮಾಡುವ ಪದ್ಧತಿ ಜಾನಪದ ಅರ್ಥ ವ್ಯವಸ್ಥೆಯಲ್ಲಿ ಕಂಡು ಬರುತ್ತದೆ. ಹಳ್ಳಿಯ ಆಯ

ಗಾರರ ಪದ್ಧತಿ ಜಾನಪದ ಶ್ರಮವಿಭಜನೆಯು ಒಂದು ಜೀವಂತ ಉದಾಹರಣೆಯಾಗಿದೆ.

ಜಾನಪದದಲ್ಲಿ ಕಂಡು ಬರುವ ಶ್ರಮವಿಭಜನೆಯುನ್ನು ನಾವು ಎರಡು ರೀತಿಯಾಗಿ ವಿಂಗಡಿಸಬಹುದು.

೧) ಕೌಟುಂಬಿಕ ಶ್ರಮ ವಿಭಜನೆ
೨) ಸಾಮಾಜಿಕ ಶ್ರಮ ವಿಭಜನೆ

೧) ಕೌಟುಂಬಿಕ ಶ್ರಮ ವಿಭಜನೆ:—ಕೌಟುಂಬಿಕ ಶ್ರಮವಿಭಜನೆ ಎಂದರೆ ಒಂದೇ ಕುಟುಂಬದಲ್ಲಿಯ ಸ್ತ್ರೀ ಹಾಗೂ ಪುರುಷರ ನಡುವೆ ಇದ್ದ ಶ್ರಮವಿಭಜನೆ. ಮಾನವನು ಮದುವೆ ಮತ್ತು ಕುಟುಂಬಗಳೆಂಬ ಸಂಸ್ಥೆಗಳನ್ನು ಕಟ್ಟಿದ ನಂತರ ಗಂಡಸು ಹೊರಗೆ ಹೋಗಿ ದುಡಿದು ಮನೆಯುವರಿಗೆ ಆಹಾರ ತಂದು ಹಾಕುವ ಕೆಲಸ ಮಾಡಿದರೆ, ಮನೆಯಲ್ಲಿ ಹೆಂಡತಿ ಅಡಿಗೆಯುನ್ನು ಮಾಡುವುದು, ಮಕ್ಕಳನ್ನು ಆರೈಕೆ ಮಾಡುವದು ಇವೇ ಮೊದಲಾದ ಮನೆಗೆಲಸಗಳನ್ನು ನೋಡಿಕೊಳ್ಳುತ್ತಿದ್ದಳು. ಇಂಥ ಶ್ರಮ ವಿಭಜನೆ ಇಂದು ನಿನ್ನೆ ಹುಟ್ಟಿದ್ದಲ್ಲ, ಅನಾದಿಕಾಲದಿಂದಲೂ ಬೆಳೆದು ಬಂದ ಪದ್ಧತಿ.

ಇಂದು ಹಳ್ಳಿಗಾಡಿನಲ್ಲಿ ವ್ಯಾಪಕವಾಗಿ ಕಂಡು ಬರುವ ಶ್ರಮ ವಿಭಜನೆ ಎಂದರೆ ಹಳ್ಳಿಯ ಆಯಗಾರರಲ್ಲಿ ಜಾನಪದ ಅರ್ಥ ವ್ಯವಸ್ಥೆಯಲ್ಲಿ ರೈತನೇ ಕೇಂದ್ರ ಬಿಂದು, ಅವನ ಸುತ್ತಲಿರುವ ಕಂಬಾರ, ಬಡಿಗ, ಹಡಪಿಗ, ಕೊರವ, ಗೊರವ, ಸಿಂಪಿಗ, ಕುಂಬಾರ ಅಂಬಿಗ, ಚಮ್ಮಾರ, ಅಗಸ, ಮಾದಿಗ, ಗಾಣಿಗ, ಹೊಲೇರ, ಉಪ್ಪಾರ, ಅಕ್ಕಸಾಲಿಗ, ಮುಂತಾದ

ಹಳ್ಳಿಯ ಆಯಗಾರರ ಬಳಗ ಅವನ ಉದ್ಯೋಗಕ್ಕೆ ಬೇಕಾಗುವ ಸಾಧನ ಸಲಕರಣೆಗಳನ್ನು ಸಿದ್ಧಗೊಳಿಸಿ ಕೊಡುತ್ತದೆ. ಮತ್ತು ಅವನ ಜೀವನಕ್ಕೆ ಬೇಕಾಗುವ ಅನುಕೂಲತೆಗಳನ್ನು ಒದಗಿಸುತ್ತದೆ. ಉದಾಹರಣೆಗಾಗಿ – ಸಮಗಾರ ರೈತನಿಗೆ ಬೇಕಾಗುವ ಚರ್ಮದ ಸಾಮಾನುಗಳನ್ನು, ಬಡಿಗ ರೈತನಿಗೆ ಬೇಕಾಗುವ ಒಕ್ಕಲುತನದ ಕಟ್ಟಿಗೆ ಸಾಮಾನುಗಳನ್ನು, ಕಂಬಾರ ಕಬ್ಬಿಣದ ಸಾಮಾನುಗಳನ್ನು ಸಿದ್ಧಪಡಿಸಿ ಒದಗಿಸುವನು. ಅಗಸ ರೈತನ ಮನೆಯ ಬಟ್ಟೆಗಳನ್ನು ತೊಳೆಯುವದು, ಅಂಬಿಗರು ನಾವುಗಳ ಮುಖಾಂತರ ಹೊಳೆ ದಾಟಿಸುವದು, ಹಡಪಿಗ ಕುಟುಂಬದ ಪುರುಷರ ಕ್ಷೌರಮಾಡುವದು, ಮಾದಿಗ ರೈತನ ಸತ್ತ ಪ್ರಾಣಿಗಳ ಅಂತ್ಯಸಂಸ್ಕಾರ, ಹೋಲೇರು ರೈತನ ಮನೆಯ ಸದಸ್ಯರು ಅಸುನೀಗಿದರೆ ಅವರ ಅಂತ್ಯಸಂಸ್ಕಾರದ ಅನುಕೂಲತೆ ಮಾಡಿಕೊಡುವದು, ಸತ್ತ ಸುದ್ದಿ ಪರ ಊರಿಗೆ ಮುಟ್ಟಿಸುವದು, ರೈತನ ಮನೆಗೆ ಬೇಕಾಗುವ ಕಟ್ಟಿಗೆ ಒಡೆದು ಕೊಡುವದು, ಕಸಗೂಡಿಸುವದು ಇತ್ಯಾದಿಗಳು, ಹೀಗೆ ಆಯಗಾರವರ್ಗ ರೈತನ ಜೀವನಕ್ಕೆ ಬೇಕಾಗುವ ಅನುಕೂಲತೆಗಳನ್ನು ಒದಗಿಸುತ್ತದೆ. ಆಯಗಾರರ ಸಹಾಯವಿಲ್ಲದೆ ರೈತನ ಬಾಳು ಪರಿಪೂರ್ಣವಾಗದು.

ಇವರೆಲ್ಲರ ಸಹಕಾರದಿಂದ ರೈತ ದವಸಧಾನ್ಯ ಬೆಳೆದು ಎಲ್ಲರ ಹೊಟ್ಟೆತುಂಬಿಸುತ್ತಾನೆ. ಅಂದರೆ ಆಯಗಾರರು ತಮ್ಮ ಶ್ರಮಕ್ಕೆ ವರ್ಷದ ಕೊನೆಗೆ ಸುಗ್ಗಿಯಲ್ಲಿ ರೈತನಿಂದ 'ಆಯ' ಪಡೆಯುತ್ತಾರೆ. ತಮಗೆ ಅವಶ್ಯವೆನಿಸಿದಾಗಲೂ ಕೂಡ ದನ ಕರುಗಳಿಗೆ ಮೇವು, ಕಟ್ಟಿಗೆ ಇತ್ಯಾದಿಗಳನ್ನು ತೆಗೆದುಕೊಂಡು

ಬರುವುದುಂಟು. ಇದು ಕೂಡ ಆಯದ ಒಂದು ರೂಪ. ಹೀಗೆ ರೈತ ತನ್ನ ಸುತ್ತಲೂ ಹಬ್ಬಿ ಕೊಂಡಿರುವ ಆಯಗಾರರ ಬಳಗದ ಹೊಟ್ಟೆ ತುಂಬಿಸುವದರ ಜೊತೆಗೆ ತನ್ನ ಬೇಕು ಬೇಡಿಕೆಗಳನ್ನು ಈಡೇರಿಸಿಕೊಳ್ಳುತ್ತಾನೆ.

ರೈತ ಮತ್ತು ಆಯಗಾರರ ಮಧುರ ಸಂಬಂಧವನ್ನೊಳಗೊಂಡ ಈ ಜಾನಪದ ಅರ್ಥವ್ಯವಸ್ಥೆ ಸ್ವಾವಲಂಬನ ಪೂರ್ಣವಾಗಿದೆ. ಹೀಗಾಗಿ ಪ್ರತಿಯೊಂದು ಹಳ್ಳಿಯೂ ಸ್ವಾವಲಂಬನ ಆರ್ಥಿಕ ವ್ಯವಸ್ಥೆಯನ್ನು ಹೊಂದಿತ್ತು. ಇಂದು ಯಾಂತ್ರಿಕತೆಯ ಪ್ರಭಾವದಿಂದ ಈ ಆಯಗಾರರ ಶಕ್ತಿ ಮತ್ತು ಕುಶಲತೆಗಳ ಅಳುವು ಮೀರಿದ ಕೆಲವು ಸಾಧನ ಸಲಕರಣೆಗಳು ರೈತನಿಗೆ ಬೇಕಾಗುತ್ತವೆ. ಆಗ ಆತನು ಪಟ್ಟಣದ ಕಡೆಗೆ ಮುಖ ಮಾಡಬೇಕಾಗುತ್ತದೆ. ಹೀಗಾಗಿ ಹಿಂದಿನ ಅರ್ಥವ್ಯವಸ್ಥೆ ಇಂದು ಸ್ವಲ್ಪ ಮಟ್ಟಿಗೆ ಸಡಿಲುಗೊಂಡಿದೆ ಎನಿಸುತ್ತದೆ[೧].

---

೧. ಪ್ರೊ ಜ್ಯೋತಿ ಹೊಸೂರ: ಜಾನಪದ ಉಪಾಸನೆ.

## ೫. ಜನಸಂಖ್ಯೆ (Population)

ಕಾರ್ಮಿಕರ ಪೂರೈಕೆಗೆ ಜನಸಂಖ್ಯೆಯೇ ಮೂಲ ಆಧಾರ ಂದರೆ ಒಂದು ರಾಷ್ಟ್ರದಲ್ಲಿಯ ಕಾರ್ಮಿಕರ ಸಂಖ್ಯೆ ಆ ರಾಷ್ಟ್ರ ಲ್ಲಿಯ ಒಟ್ಟು ಜನಸಂಖ್ಯೆಯನ್ನು ಅವಲಂಬಿಸಿದೆ. ಸಾಮಾನ್ಯ ಾಗಿ ಜನಸಂಖ್ಯೆ ಹೆಚ್ಚಿದ್ದರೆ ಕಾರ್ಮಿಕರ ಸಂಖ್ಯೆ ಹೆಚ್ಚಿರುತ್ತದೆ, ನಸಂಖ್ಯೆ ಕಡಿಮೆ ಇದ್ದರೆ ಕಾರ್ಮಿಕರ ಸಂಖ್ಯೆ ಕಡಿಮೆ ಇರು ್ತದೆ. ಶಿಕ್ಷಣ, ತಾಂತ್ರಿಕ ಜ್ಞಾನ, ಅನುಭವ ಉತ್ತಮ ಸಲ ರಣೆಗಳು, ಕಾರ್ಮಿಕರ ತರಬೇತಿ ಮೊದಲಾದವುಗಳು ಕಾರ್ಮಿಕರ ದಕ್ಷತೆಯನ್ನು ಹೆಚ್ಚಿಸುವದರ ಮೂಲಕ ಉತ್ಪಾದನೆ ಯನ್ನು ಹೆಚ್ಚಿಸುತ್ತವೆ.

ಆದರೆ ಇಂದು ಅನೇಕ ರಾಷ್ಟ್ರಗಳಲ್ಲಿ ಜನಸಂಖ್ಯೆ ಭರ ಂದ ಏರುತ್ತಿದೆ. ಈ ಏರುತ್ತಿರುವ ಜನಸಂಖ್ಯೆ ರಾಷ್ಟ್ರಕ್ಕೆ ಸ್ತಿಯಾಗಿರದೆ ಬಾಯಿತ್ತವಾಗಿದೆ. ಏಕೆಂದರೆ ಹೆಚ್ಚುತ್ತಿರುವ ನಸಂಖ್ಯೆಗೆ ಬೇಕಾಗುವ ಜೀವನಾವಶ್ಯಕ ವಸ್ತುಗಳನ್ನು ದಗಿಸುವದು ಇಂದಿನ ಕಲ್ಯಾಣ ರಾಷ್ಟ್ರಗಳ ಹೊಣೆಯಾಗಿದೆ. ದ್ದರಿಂದಲೇ ಬಹಳಷ್ಟು ರಾಷ್ಟ್ರಗಳು ಜನಸಂಖ್ಯೆ ಸಮಸ್ಯೆ ಯನ್ನು ಎದುರಿಸುತ್ತಿವೆ. ಈ ಸಮಸ್ಯೆಗೆ ಪರಿಹಾರ ಸೂಚಿಸುವದ ್ಕಾಗಿಯೇ ಆಂಗ್ಲ ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಪ್ರೊ. ಾಮಸ್ ರಾಬರ್ಟ ಮಾಲಸ್ಥರು ಜನಸಂಖ್ಯೆಯ ಸಿದ್ಧಾಂತ ನ್ನು ಪ್ರತಿಪಾದಿಸಿ ಜನಸಂಖ್ಯೆಯ ನಿಯಂತ್ರಣದ ಮಹತ್ವ

ವನ್ನು ವಿವರಿಸಿದ್ದಾರೆ. ಅವರು ಸೂಚಿಸಿದ ನಿಯಂತ್ರಣ ಉಪಾಯಗಳೆಂದರೆ:

೧) ಸಂತತಿ ನಿಯಂತ್ರಣವನ್ನು ಅನುಸರಿಸುವದು.
(Birth control)

೨) ಮದುವೆಯ ವಯಸ್ಸನ್ನು ಹೆಚ್ಚಿಸುವದು.
(Late marriage)

೩) ಆತ್ಮ ಸಂಯಮವನ್ನು ಆಚರಿಸುವದು.
(Self control

೪) ಬ್ರಹ್ಮಚರ್ಯವನ್ನು ಪಾಲಿಸುವದು.
(Celibacy

ಈ ಕ್ರಮಗಳಿಂದ ಜನಸಂಖ್ಯೆಯನ್ನು ನಿಯಂತ್ರಿಸದೆ ಇದ್ದರೆ ಪ್ರಕೃತಿಯು ತನ್ನ ಪ್ರಕೋಪದಿಂದ ಪ್ರತಿಬಂಧಕ ಕ್ರಮಗಳನ್ನು ಅನುಸರಿಸಿ ಜನಸಂಖ್ಯೆಯನ್ನು ನಿಯಂತ್ರಿಸುತ್ತದೆ. ಎಂದು ಸೂಚಿಸಿದ್ದಾರೆ.

ಅವರ ಈ ತತ್ವ ಸಂಪೂರ್ಣವಾಗಿ ಅನ್ವಯಿಸದೆ ಇದ್ದರೂ ಕೂಡ ಜನಸಂಖ್ಯೆಯ ನಿಯಂತ್ರಣದ ಹಲವು ಪದ್ಧತಿಗಳಿಗೆ ಅನುಪುವಮಾಡಿ ಕೊಟ್ಟಿದೆ. ಇಂದು ಎಲ್ಲೆಡೆಯಲ್ಲಿಯೂ ನಾವು ವ್ಯಾಪಕವಾದ ಕುಟುಂಬ ಯೋಜನೆಯ ಕಾರ್ಯಕ್ರಮಗಳನ್ನು ಕಾಣುತ್ತೇವೆ. ಕುಟುಂಬ ಯೋಜನೆಯ ತತ್ವ "ಮಿತ ಸಂತಾನ ಒಂದು–ಎರಡು ಬೇಕು. ಮೂರು ಸಾಕು: ಆರುತಿಗೊಬ್ಬ ಮಗಳು ಕೀರ್ತಿಗೊಬ್ಬ ಮಗ: ನಾವಿಬ್ಬರೆ–ನಮಗಿಬ್ಬರೆ: ಈ ಎಲ್ಲ ಘೋಷಣೆಗಳು ಜನಸಂಖ್ಯೆಯ ನಿಯಂತ್ರಣದ ಮಹತ್ವವನ್ನು ವಿವರಿಸುತ್ತವೆ. ಆದ್ದರಿಂದ ಇಂದಿನ ಹೆಣ್ಣು ಮಕ್ಕಳು ಹೆಚ್ಚು

ಮಕ್ಕಳನ್ನು ಪಡೆಯಲು ಆಶಿಸುವದಿಲ್ಲ ಮತ್ತು ಪಡೆಯುವ ದಿಲ್ಲ.

ಇದಕ್ಕೆ ತದ್ವಿರುದ್ಧವಾದಂತಹ ವಿಚಾರಗಳನ್ನು ನಾವು ಜಾನಪದರಲ್ಲಿ ಕಾಣುತ್ತೇವೆ. ಜಾನಪದರು ಜನಸಂಖ್ಯೆಯ ನಿಯಂತ್ರಣವನ್ನು ವಿಚಾರಿಸದೇ ಮಕ್ಕಳನ್ನು ಹೆಚ್ಚು ಪಡೆ ಯುವದರಲ್ಲಿಯೇ ಅವರಿಗೆ ಹೆಚ್ಚು ಒಲವು. ಎಂಬುದು ಅವರ ತ್ರಿಪದಿ ಮತ್ತು ಗಾದೆಗಳಲ್ಲಿ ಕಾಣಬಹುದು. ಬಡತನ ಒಂದು ಭೀಕರ ಶಾಪವೆಂದು ಭಾವಿಸುವವರೇ ಬಹಳ ಜನ. ಆದರೆ ಗರತಿಯ ದೃಷ್ಟಿಯಲ್ಲಿ ಬಡತನ ಮತ್ತು ಬಹುಸಂತಾನ, ಅಂಥ ದುರಂತಗಳಲ್ಲ. ವೃದ್ಧಿಯ ದುಡಿಮೆ ದೇವ ನಂಬಿಕೆ ಗಳಿಂದ ಬಾಳಿನ ಅರೆ-ಕೊರೆಗಳನ್ನು ದೂರಮಾಡಿಕೊಳ್ಳುವ ಮನೋಧೈರ್ಯ ಅವಳದು.

'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ?' ಎಂಬ ಶ್ರದ್ಧೆ ಜಾನಪದರವರದು.

ದಾರುಣವಾದ ದಟ್ಟ ದಾರಿದ್ರ್ಯದ ದವಡೆಯಲ್ಲಿದ್ದರೂ ತಾಯಿಗೆ ಮಗು ಬೇಕು. "ಮಕ್ಕಳಿಲ್ಲದವರಿಗೆ ಸ್ವರ್ಗವಿಲ್ಲ" ಎಂಬ ನಂಬಿಕೆ ಅವರಲ್ಲಿದೆ. ಗರತಿಗೆ ಮಕ್ಕಳಿಲ್ಲದಿದ್ದರೆ ಆಕೆ ಬಂಜೆ. ಸಮಾಜ ಅವಳನ್ನು ಕೀಳು ದೃಷ್ಟಿಯಿಂದ ಕಾಣುತ್ತದೆ.

'ಬಂಜೆ ಹೋದಲ್ಲಿ ಸಂಜೆ' ಎಂಬ ಮಾತು ಗರತಿಯ ಕಿವಿಗೆ ಚುಚ್ಚುತ್ತದೆ. ಮಕ್ಕಳಿಲ್ಲದ ಗರತಿಯ ಜೀವನ :

ಬಾಲಕರಿಲ್ಲದ ಬಾಲೆದ್ಯಾತರ ಜನ್ಮ ।
ಬಾಡಿಗೀ ಎತ್ತು ದುಡಿದ್ಹ್ಂಗ । ಬಾಳೆಲಿಯು
ಹಾಸುಂಡು ಬೀಸಿ ಒಗೆದ್ಹ್ಂಗ ॥

ನಮ್ಮ ಗೃಹಿಣಿಗೆ ಮನೆಯು ಮಕ್ಕಳೇ ಸಂಪತ್ತು. ಬೇರೆ ಸಂಪತ್ತಿನ ಆಸೆ ಆಕೆಗಿಲ್ಲವೆಂಬುದು ಅವಳು ಹೇಳುವ ತ್ರಿಪದಿಯಿಂದ ತಿಳಿಯುತ್ತದೆ.

ಬಡತನ ನನಗಿರಲಿ ಬಹಳ ಮಕ್ಕಳಿರಲಿ ।
ಮ್ಯಾಗ ಗುರುವಿನ ದಯೆ ಇರಲಿ । ನನ ಗುರುವೆ
ಬಡತನದ ಚಿಂತೆ ನನಗಿರಲಿ ॥

ಬಡತನ ಸಂಕಷ್ಟಗಳನ್ನುಂಟು ಮಾಡಬಹುದು. ಆದರೆ ಆ ಸಂಕಟ ಮನೆಯಲ್ಲಿ ಒಳಗೊರಗಾಡುವ ಮಕ್ಕಳ ಆನಂದದಿಂದ ಕರಗಿ ಹೋಗುವದು. ಧನ ಕೊಡುವ ಸುಖಕ್ಕಿಂತ ಮಕ್ಕಳು ಕೊಡುವ ಸುಖವು ಜೀವನದಲ್ಲಿ ಹಿರಿದಾದುದು.

ಬಡವಿಯು ಮಕ್ಕಳು ನಡೆವರ ಸಂತೋಷ ।
ಹುಡಿಯಾಡಿ ಮನೆಗೆ ಬರುವಾಗ । ತಾಯಿಗೆ
ಬಡತನದ ಜ್ಞಾನ ಮರೆಯಿತು ॥

ಆನಂದದ ಆಗರವಾಗಿರುವ ಮಕ್ಕಳನ್ನು ತಾಯಿ ಬಡತನದ ಬೇಗೆಯಲ್ಲಿ ಬಳಲಿದರೂ ಬಡಿಯಬಾರದು ಎಂದು ಹೇಳುತ್ತಾಳೆ,

ಬಡತನ ಬಂದರ ಬಡಿಬ್ಯಾಡ ಮಕ್ಕಳನ ।
ಆಡ್ಯಾಡಿ ಬಂದು ತೊಡಿಮ್ಯಾಲ । ಕೂತರ
ಬಂದ ಬಡತನ ಬೈಲಾಗಿ ॥

ಅಂದಿನ ಪರಿಸ್ಥಿತಿಯೇ ಬೇರೆ. ಜನಸಂಖ್ಯೆ ಕಡಿಮೆಯಿತ್ತು ಮತ್ತು ಮರಣ ಪ್ರಮಾಣ ಅಧಿಕವಾಗಿತ್ತು. ಜನನ ಪ್ರಮಾಣ ಕಡಿಮೆಯಾಗಿತ್ತು. ಔಷಧಗಳ ಬಳಕೆ ಅಷ್ಟಿರಲಿಲ್ಲ. ರೋಗ ರುಜಿನಗಳ ಕಾಟ ಹೆಚ್ಚಾಗಿದ್ದಿತು. ಆದ್ದರಿಂದ ಅಂದು ಮಕ್ಕಳನ್ನು ಹೆಚ್ಚಿಗೆ ಪಡೆಯಲು ಆಶಿಸುತ್ತಿದ್ದರು. ಅಷ್ಟೇ ಅಲ್ಲ ಮುತ್ತೈದಿ ಹೆಣ್ಣುಮಗಳು ಹಿರಿಯರಿಗೆ ನಮಸ್ಕರಿಸಿದಾಗ ಎಂಟು ಮಕ್ಕಳನ್ನು ಹಡಿ ಎಂದು ಆಶೀರ್ವದಿಸುವ ರೂಢಿ ಯಿತ್ತು.

ಇಂದಿಗೂ ಕೂಡ ಜಾನಪದರಲ್ಲಿ ಮಕ್ಕಳ ಬಗ್ಗೆ ಇದ್ದ ಧೋರಣೆ ಸಂಪೂರ್ಣವಾಗಿ ಕಡಿಮೆ ಆಗಿಲ್ಲ. ಇದು ಭಾರತದ ಆರ್ಥಿಕಾಭಿವೃದ್ಧಿಗೆ ಬಹು ದೊಡ್ಡ ಕಾಲ್ತೊಡಕಾಗಿದೆ. ಈ ಜಾನಪದರಲ್ಲಿ ಮಕ್ಕಳ ಬಗ್ಗೆ ಇದ್ದ ಧೋರಣೆ ಆಧುನಿಕ ಜನ-ಸಂಖ್ಯೆ ಧೋರಣೆಗೆ ವಿರೋಧವೆನಿಸುತ್ತದೆ.

## ೬. ವಿನಿಮಯ ಪದ್ಧತಿ (Exchange)

ವಿನಿಮಯವು ಅರ್ಥಶಾಸ್ತ್ರದ ಮಹತ್ವವಾದ ಅಂಗಗಳಲ್ಲಿ ಒಂದು. ಮಾನವನು ತನ್ನ ಬಯಕೆಗಳ ಈಡೇರಿಕೆಗಾಗಿ ಇತರರನ್ನು ಎಂದು ಅವಲಂಬಿಸಬೇಕಾಯಿತೋ ಅಂದೇ ವಿನಿಮಯ ಪದ್ಧತಿಯೂ ಹುಟ್ಟಿಕೊಂಡಿತು. ಪ್ರಾಚೀನ ಮಾನವನ ಅಥವಾ ಮಾನವನ ನಾಗರಿಕತೆಯ ಪ್ರಥಮ ಹಂತದಲ್ಲಿ ಇಷ್ಟಗಳು ಮಿತವಾಗಿದ್ದವು. ಮತ್ತು ಅವನ ಆರ್ಥಿಕ ಜೀವನ ಸ್ವಯಂ ಪರಿಪೂರ್ಣವಾಗಿತ್ತು. ಕಾಲ ಗತಿಸಿದಂತೆ ಇಷ್ಟಗಳ ತೃಪ್ತಿ ನೇರ ಮತ್ತು ಸರಳವಾಗಿರದೇ ಕ್ಲಿಷ್ಟವಾಯಿತು. ತನ್ನ ಉಪಭೋಗಕ್ಕೆ ಆಗತ್ಯವಿರುವ ಎಲ್ಲ ಸರಕುಗಳನ್ನು ಉತ್ಪಾದಿಸಲಾರದೇ ಹೋದ. ತದನಂತರ ವೃತ್ತಿ ನೈಪುಣ್ಯತೆಯನ್ನು ಪಡೆದುಕೊಂಡು ಒಂದೇ ವಿಧವಾದ ಸರಕನ್ನು ಉತ್ಪಾದಿಸಿ ತಾನು ಉತ್ಪಾದಿಸಿದ ಸರಕನ್ನು ಇತರರು ಉತ್ಪಾದಿಸಿದ ಸರಕುಗಳೊಂದಿಗೆ ವಿನಿಮಯಗೊಳಿಸಿ ಇಷ್ಟಗಳನ್ನು ತೃಪ್ತಿಗೊಳಿಸತೊಡಗಿದನು.

ಹೀಗೆ ವಿನಿಮಯವು ಮೊದಮೊದಲು ವಸ್ತು—ವಸ್ತುಗಳ ರೂಪದಲ್ಲಿ ಪ್ರಾರಂಭವಾಗಿ ಇಂದು ವಸ್ತು ಹಣಗಳ ರೂಪವನ್ನು ತಾಳಿದೆ. ಮಾನವನು ಇಂದು ತಾನು ಉತ್ಪಾದಿಸಿದ ವಸ್ತುಗಳನ್ನು ಪೇಟೆಯಲ್ಲಿ ಹಣಕ್ಕೆ ಮಾರಿ ಆ ಹಣದಿಂದ ತನಗೆ ಬೇಕಾದ ವಸ್ತುಗಳನ್ನು ಇತರರಿಂದ ಕೊಂಡುಕೊಳ್ಳುತ್ತಾನೆ.

ಇಂದು ನಾವು ಉಪಭೋಗಿಸುವ ಅನೇಕ ವಸ್ತುಗಳು ಕಾರಖಾನೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸಲ್ಪಡುತ್ತವೆ. ಆ ವಸ್ತುಗಳ ಉತ್ಪಾದನೆಯಲ್ಲಿ ತೊಡಗಿದ

ಟಕಗಳು ತಮ್ಮ ಶ್ರಮಕ್ಕೆ ಪ್ರತಿಫಲವಾಗಿ ಉತ್ಪನ್ನ
ಹಣವನ್ನು) ಪಡೆಯುತ್ತವೆ. ಆ ಹಣದಿಂದ ನಮಗೆ ಬೇಕಾದ
ರಸ್ತುಗಳನ್ನು ಪೇಟೆಯಲ್ಲಿ ಪಡೆಯುತ್ತೇವೆ. ಇಲ್ಲಿ ಹಣವು
ಪ್ರಮುಖ್ಯವಾದ ಕಾರ್ಯವನ್ನು ನಿರ್ವಹಿಸುತ್ತದೆ. ಹಣವು
ನಿಮಯದ ಸಾಧನೆಯಾಗಿ ಕಾರ್ಯ ಮಾಡುತ್ತದೆ.

ಜಾನಪದ ಆರ್ಥಿಕವ್ಯವಸ್ಥೆಯಲ್ಲಿಯೂ ನಾವು ವಿನಿಮಯ
ವನ್ನು ಕಾಣುತ್ತೇವೆ. ಅಲ್ಲಿಯ ವಿನಿಮಯದಲ್ಲಿ ಹಣವು
ಮುಖ್ಯವಾದ ಪಾತ್ರವನ್ನಾಡುವದಿಲ್ಲ. ಅಲ್ಲಿ ವಸ್ತು ವಸ್ತುಗಳ
ನಿಮಯ ಪದ್ಧತಿ ಉಂಟು. (Barter system)

ಹಳ್ಳಿಯ ಆಯಗಾರರು ತಾವು ಸಲ್ಲಿಸಿದ ಸೇವೆಗೆ ಹಣ
ನ್ನು ಪಡೆಯುವದಿಲ್ಲ. ತಾವು ಸಲ್ಲಿಸಿದ ಸೇವೆಗೆ ದವಸ-ಧಾನ್ಯ
ಳನ್ನು ಪಡೆಯುತ್ತಾರೆ. ಪೇಟೆಯಲ್ಲಿ ಉತ್ಪಾದಿಸಿದ ವಸ್ತು
ಳನ್ನು ಮಾತ್ರ ಹಣ ಕೊಟ್ಟು ಕೊಳ್ಳುತ್ತಾರೆ. ಹಳ್ಳಿಗಳಲ್ಲಿ
ಸ್ತುಗಳ ವಿನಿಮಯ ಪದ್ಧತಿಯೇ ಹೆಚ್ಚು ಎನ್ನುವದಕ್ಕೆ ಕೆಳಗಿನ
ದೆ ಉದಾಹರಣೆಯಾಗಿದೆ.

'ಮಲ್ಲಕ್ಕ ಬೆಲ್ಲ ಕೊಟ್ಟರ, ಕಲ್ಲಕ್ಕ ಕರದು ಕಡಬು ಕೊಡ
ಳ'[೧]

ವಿನಿಮಯದ ಇನ್ನೊಂದು ಉದಾಹರಣೆಯೆಂದರೆ ಆಹೇರ
ಥವಾ 'ಮುಯ್ಯ' ಪದ್ಧತಿ. ಧಾರ್ಮಿಕ-ಕಾರ್ಯಗಳಾ
ಂಥ ಮದುವೆ, ಮುಂಜಿವೆ ಇಂಥ ಅನೇಕ ಕಾರ್ಯಗಳಲ್ಲಿ ಪರ
ರರು ಮುಯ್ಯ ಮಾಡುವದು ಮತ್ತು ಮಾಡಿಸಿಕೊಳ್ಳುವದು

೧. ಪ್ರೊ. ಜ್ಯೋತಿ ಹೊಸೂರ : ಜಾನಪದ ಉಪಾಸನೆ

ವಸ್ತುಗಳು ವಿನಿಮಯ ಪದ್ಧತಿಯಾಗಿದೆ. ಅಷ್ಟೇ ಅಲ್ಲ ಇಂತಹ ಕಾರ್ಯಗಳಿಗೆ ಹಲವಾರು ಜನರ ಸಹಕಾರ ಅಗತ್ಯ. ಅಂತಹ ಹಲವಾರು ಜನರು ಬಂದು ಎಲ್ಲ ಬಗೆಯ ಕಾರ್ಯಗಳಲ್ಲಿ ತನು-ಮನಗಳಿಂದ ದುಡಿಯುವದುಂಟು. ಇದು ಕೂಡ ವಿನಿಮಯ ಪದ್ಧತಿಯ ಒಂದು ಉದಾಹರಣೆಯಾಗಿದೆ.

ಹಳ್ಳಿಗಳಲ್ಲಿ ಇಂದಿಗೂ ಎತ್ತುಗಳ ಮುಯ್ಯ ಪದ್ಧತಿ ಇದೆ. ಬಿತ್ತುವಾಗ ಒಬ್ಬ ರೈತನು ಇನ್ನೊಬ್ಬ ರೈತನೊಂದಿಗೆ ಮುಯ್ಯ ( ಸವಡಿ ) ಕೊಡುವದು, ಬೇಸಿಗೆಯಲ್ಲಿ ಹೊಲಗಳನ್ನು ಹದ ಮಾಡುವಾಗ, ನೇದಿಲು ಹೊಡೆಯುವಾಗ ಹಂತಿ ಹೊಡೆಯುವಾಗ, ರಾಶಿ ಒಯ್ಯುವಾಗ ಎತ್ತುಗಳ ಮುಯ್ಯಕೊಡುವದನ್ನು ಕಾಣುತ್ತೇವೆ. ಒಂಟಿ ಎತ್ತು ಇದ್ದಾತ, ಇನ್ನೊಬ್ಬ ಒಂಟಿ ಎತ್ತು ಇದ್ದವನ ಜೊತೆ ಸೇರಿಕೊಂಡು ಒಕ್ಕಲುತನವನ್ನು ಸಾಗಿಸುತ್ತಾನೆ. ಇಬ್ಬರ ಹೊಲಗಳ ಕೆಲಸಗಳನ್ನು ಸಹಕಾರದಿಂದ ಮಾಡಿಕೊಂಡು ಬೆಳೆ ತೆಗೆದುಕೊಳ್ಳುತ್ತಾರೆ, ಈ ಎಲ್ಲ ಘಟನೆಗಳು ಹಳ್ಳಿಯ ವಿನಿಮಯ ಪದ್ಧತಿಯನ್ನು ಸೂಚಿಸುತ್ತವೆ.

## ವಿತರಣೆ (Distribution)

ಉತ್ಪಾದನೆಯಿಂದ ಬಂದ ವರಮಾನವನ್ನು ಉತ್ಪಾದನೆಯಲ್ಲಿ ಭಾಗ ವಹಿಸಿದ ಘಟಕಗಳಲ್ಲಿ ಹಂಚಲಾಗುತ್ತದೆ. ವರಮಾನವನ್ನು ಘಟಕಗಳಲ್ಲಿ ಹಂಚುವದಕ್ಕೆ ವಿತರಣೆಯೆಂದು ಕರೆಯುತ್ತಾರೆ.

ಭೂಮಿಯು ಗೇಣಿಯ ರೂಪದಲ್ಲಿ, ಕಾರ್ಮಿಕರು ಕೂಲಿ ಹಾಗೂ ವೇತನದ ರೂಪದಲ್ಲಿ, ಬಂಡವಾಳವು ಬಡ್ಡಿಯ ರೂಪ

ದಲ್ಲಿ ಪ್ರತಿಫಲವನ್ನು ಪಡೆಯುತ್ತವೆ. ಈ ಎಲ್ಲ ಉತ್ಪಾದನಾ ಘಟಕಗಳಿಗೆ ಅವುಗಳವುಗಳ ಉತ್ಪಾದನಾಶಕ್ತಿಗನುಗುಣವಾಗಿ ವರಮಾನವನ್ನು ಹಂಚಿದನಂತರ ಉಳಿದುದನ್ನು ಸಂಘಟಕನು ಲಾಭದ ರೂಪದಲ್ಲಿ ಪಡೆಯುತ್ತಾನೆ.

ಜಾನಪದ ಅರ್ಥ ವ್ಯವಸ್ಥೆಯಲ್ಲಿ ನಾವು ವಿತರಣೆಯನ್ನು ಕಾಣುತ್ತೇವೆ. ಅಲ್ಲಿಯ ವಿತರಣೆಯು ಇಂದಿನ ಹಾಗೆ ವೈಜ್ಞಾನಿಕವಾಗಿ, ವರ್ಗೀಕರಣವಾಗಿರದೇ ಇದ್ದರೂ ಸಂಪ್ರದಾಯ, ರೂಢಿಗಳನ್ನಾಧರಿಸಿದ ವಿತರಣೆ ಪದ್ಧತಿ ಇತ್ತು.

ರೈತನ ದೃಷ್ಟಿಯಲ್ಲಿ ದೇವರು ಒಬ್ಬ ಮುಖ್ಯವಾದ ಉತ್ಪಾದನಾ ಘಟಕ. ಏಕೆಂದರೆ ದೇವರ ಕರುಣೆ ಇಲ್ಲದೇ ಹುಟ್ಟು ಬದುಕು ಸಾಧ್ಯವಿಲ್ಲ. ಎಂಬ ನಂಬಿಕೆ ಅವನದು. ಆದ್ದರಿಂದ ರೈತನು ತಾನು ಉತ್ಪಾದಿಸಿದ ಉತ್ಪಾದನೆಯಲ್ಲಿ ಸ್ವಲ್ಪ ಭಾಗವನ್ನು ದೇವರಿಗೆ ಅರ್ಪಿಸುತ್ತಾನೆ. ತನ್ನ ಉಪಭೋಗದ ಪೂರ್ವದಲ್ಲಿ ದೇವರಿಗೆ ಮುಟ್ಟಬೇಕು, ನಂತರ ಮನುಷ್ಯರಿಗೆ ಅನ್ನುವ ಭಾವನೆ ಅವನದು. ಇಂದಿಗೂ ಕೂಡ ಹಳ್ಳಿಗಳಲ್ಲಿ ರೈತರು ರಾಶಿಗಳಲ್ಲಿ ಕೆಲವೊಂದು ಭಾಗವನ್ನು ದೇವರಿಗಾಗಿ ತೆಗೆದಿಡುವ ವಾಡಿಕೆಯಿದೆ. ಅಷ್ಟೇ ಏಕೆ ಎಮ್ಮೆ, ಅಥವಾ ಆಕಳು ಈದಾಗ 'ಹೈನು ಮೀಸಲು' ಒಡಿಯುವ ಪದ್ಧತಿ ಇದಕ್ಕೊಂದು ಉದಾಹರಣೆಯಾಗಿದೆ.

ಹಳ್ಳಿಯ ಆಯಗಾರರು ವರ್ಷವಿಡೀ ರೈತನ ಉತ್ಪಾದನೆಯಲ್ಲಿ ಪಾಲ್ಗೊಳ್ಳುವದರಿಂದ ಅವರ ಪಾಲು ಅವರಿಗೆ ಮುಟ್ಟಬೇಕಲ್ಲವೇ ? ರೈತನು ವರ್ಷದ ಕೊನೆಗೆ ರಾಶಿಗಳಲ್ಲಿ

ಆಯಗಾರರಿಗೆ ಅವರ 'ಆಯ' ಕೊಟ್ಟು ಅವರ ಋಣ ತೀರಿಸುವನು.

ರೈತನಿಗೆ ಹಣದ ಅವಶ್ಯಕತೆ ಬಿದ್ದಾಗ ಹಳ್ಳಿಯ ಸಾಹುಕಾರರ ಮೊರೆ ಹೋಗುತ್ತಾನೆ. ಮತ್ತು ಅವರಿಂದ ಪಡೆದ ಸಾಲವನ್ನು ಉಪಯೋಗಿಸಿ ಉತ್ಪಾದಿಸಿದ ಫಸಲಿನಲ್ಲಿ ಹೆಚ್ಚಿನ ಭಾಗವನ್ನು ಸಾಹುಕಾರರಿಗೆ ಬಡ್ಡಿಯ ರೂಪದಲ್ಲಿ ಕೊಡುತ್ತಾನೆ. 'ಇದರಿಂದ ರೈತ ಎಷ್ಟೋ ಸಲ ತನ್ನ ಹೊಲ ಮನೆಗಳನ್ನು ಮಾರುವದೂ ಉಂಟು. ಹಳ್ಳಿಗಾಡಿನಲ್ಲಿ ಇಂದಿಗೂ ಸವಕ್ಕಿ (ವಾತ) ಪದ್ಧತಿ ಜಾರಿಯಲ್ಲಿ ಉಂಟು. ರೈತನಿಗೆ ಧವಸ ಧಾನ್ಯಗಳ ಕೊರತೆಯಾದಾಗ ಬೇರೆ ರೈತರಿಂದ ಕೈಗಡ ರೂಪದಲ್ಲಿ ಧಾನ್ಯವನ್ನು ಪಡೆಯುತ್ತಾನೆ. ಈ ರೀತಿ ಧಾನ್ಯ ಪಡೆದ ರೈತನು ತನ್ನ ಹೊಲಗಳ ರಾಶಿಯಾದ ನಂತರ ತಾನು ಪಡೆದುಕೊಂಡ ಧಾನ್ಯದ ಒಂದೂಕಾಲು ಪಟ್ಟು (ಸವ್ವಾ ಪಟ್ಟು) ಧಾನ್ಯವನ್ನು ಹಿಂದಿರುಗಿಸಬೇಕಾಗುತ್ತದೆ. ಅಂದರೆ ಇಲ್ಲಿ ಮೇಲಿನ ಕಾಲು ಭಾಗವನ್ನು ಬಡ್ಡಿಯ ರೂಪದಲ್ಲಿ ಕೊಡಬೇಕಾಗುತ್ತದೆ. ಇದಕ್ಕೆ ಸವಕ್ಕಿ ಅಥವಾ ವಾತ ಪದ್ಧತಿ ಎಂದು ಕರೆಯುವದುಂಟು.

ಉತ್ಪಾದನೆಯ ಒಂದಿಷ್ಟು ಭಾಗವನ್ನು ಭೂ ಕಂದಾಯದ ರೂಪದಲ್ಲಿ ಅರ್ಪಿಸುತ್ತಾನೆ. ಇವೆಲ್ಲವುಗಳ ಜೊತೆಗೆ ತಾನು ಬೆಳೆದ ಫಸಲಿನಲ್ಲಿ ಕೆಲವೊಂದನ್ನು ಗುರುಹಿರಿಯರಿಗೆ ದಾನದ ರೂಪದಲ್ಲಿ ಕೊಡುವ ಪದ್ಧತಿ ಇತ್ತು. ದಾನ ಮಾಡುವದು, ದತ್ತಿ ಬಿಡುವದು, ದಾಸೋಹ ಇಂತಹ ಹಲ

ವಾರು ಆಧ್ಯಾತ್ಮಿಕ ಚಟುವಟಿಕೆಗಳಿಗೆ ತನ್ನ ಉತ್ಪಾದನೆಯ ಒಂದು ಪಾಲನ್ನು ಹಂಚುತ್ತಿದ್ದ. ಅವರ ದಾನ ಪರಿಶುದ್ಧ ವಾದುದೆಂದು ಕೆಳಗಿನ ತ್ರಿಪದಿಯಿಂದ ವಿದಿತವಾಗುತ್ತದೆ.

ಮನವ ಮಲ್ಲಿಗಿ ಮಾಡಿ ತನುವ ಕ್ಯಾದಿಗಿ ಮಾಡಿ ।
ನನ್ನೈದು ಬೆರಳು ಸಮಮಾಡಿ । ನೀಡೇನ
ನನ್ನ ಸಲಹುಂಥ ಗುರುವಿಗೆ ॥

ಇವೆಲ್ಲವುಗಳನ್ನು ತೀರಿಸಿದ ನಂತರ ಉಳಿಯುವ ಉತ್ಪಾದನೆಯು ರೈತನಿಗೆ ಸಲ್ಲತಕ್ಕದ್ದು. ಅದು ಅವನ ಬೆವರಿನ ಸಿರಿ. ಅರ್ಥಶಾಸ್ತ್ರದಲ್ಲಿಯೂ ಕೂಡ ಉಳಿದೆಲ್ಲ ಉತ್ಪಾದನಾ ಘಟಕಗಳಿಗೆ ಅವುಗಳ ಪಾಲು ಹಂಚಿದ ನಂತರ ಉಳಿಯುವದೇ ಸಂಘಟಕನ ಲಾಭ.

## ೮. ರೂಢಿ, ಸಂಪ್ರದಾಯ ಮತ್ತು ನಂಬಿಕೆಗಳು

ನಮ್ಮ ಜಾನಪದರು ಆಚರಿಸುವ ಹಬ್ಬ ಹರಿದಿನಗಳಲ್ಲಿ, ರೂಢಿ, ಸಂಪ್ರದಾಯಗಳಲ್ಲಿ ಮತ್ತು ನಂಬಿಕೆಗಳಲ್ಲಿ ಎಷ್ಟೋ ಆರ್ಥಿಕ ವಿಚಾರಗಳನ್ನು ಕಾಣುತ್ತೇವೆ.

ಭಾರತ ಕೃಷಿ ಪ್ರಧಾನವಾದ ರಾಷ್ಟ್ರ. ಕೃಷಿ ರಂಗ ಮಳೆಯನ್ನು ಅವಲಂಬಿಸಿದ ಕಾರಣದಿಂದ ಹಲವಾರು ಪ್ರದೇಶಗಳಲ್ಲಿ ಹಲವಾರು ರೀತಿಯಿಂದ ಮಳೆರಾಯನನ್ನು ಆಹ್ವಾನಿಸುವ ಸಂಪ್ರದಾಯವುಂಟು. ಹಳ್ಳಿಯ ತರುಣ ತರುಣಿಯರು ಕೂಡಿಕೊಂಡು ಊರ ಮುಂದಿನ ಕೆರೆಗೆ ಹೋಗುತ್ತಾರೆ. ಅಲ್ಲಿ ಕೆರೆಯ ನೀರಿನಿಂದ ಮತ್ತು ಅಲ್ಲಿಯ ಮಣ್ಣಿನಿಂದ ಮಳೆರಾಯನ ಒಂದು

ಮೂರ್ತಿಯನ್ನು ತಯಾರಿಸಿ ಅದನ್ನು ಅರೆನಗ್ನನಾದ ಹುಡುಗನ ಮೇಲೆ ಹೊರಿಸುತ್ತಾರೆ. ಅನಂತರ ಬೀದಿ ಬೀದಿಗಳಲ್ಲಿ ಮೆರವಣಿಗೆ ಸಾಗುತ್ತದೆ.

ಹುಯ್ಯೋ ಹುಯ್ಯೋ ಮಳೆರಾಯ ।
ಹೂವಿನ ತೋಟಕ ನೀರಿಲ್ಲ
ಬಾರೋ ಬಾರೋ ಮಳೆರಾಯ
ಬಾಳಿಯ ತೋಟಕ ನೀರಿಲ್ಲ [೧].

ಎಂದು ಮುಂತಾಗಿ ಜೊತೆಯವರು ಕುಣಿಯುತ್ತಾ ಹಾಡುತ್ತಾರೆ. ಮೆರವಣಿಗೆ ಹೋಗುವಾಗ ಹಾದಿಯಲ್ಲಿರುವ ಮನೆ ಮನೆಯವರು ಮಳೆರಾಯನ ಮೂರ್ತಿಯ ಮೇಲೆ ನೀರು ಹೊಯ್ದು ಕಾಣಿಕೆ ನೀಡುತ್ತಾರೆ. ಮೆರವಣಿಗೆ ಮುಗಿದ ನಂತರ ಕೆರೆಯ ಬಳಿ 'ಪರ್ವ' ಮಾಡಿ ಎಲ್ಲರೂ ಊಟಮಾಡುತ್ತಾರೆ.

ಇನ್ನು ಕೆಲವೊಂದು ಕಡೆ ಮಳೆರಾಯನನ್ನು ಪೂಜಿಸಿ ಸ್ವಾಗತಿಸುವ ಪದ್ಧತಿ ಬೇರೆ ಇದೆ.

ಮಳೆರಾಯ ಹುಯ್ಯಲಿ । ಕೆರೆರಾಯ ತುಂಬಲಿ
ಹನ್ನೆರಡು ಕೂಡಿ ಹರಿಯಾಲಿ । ನಮ್ಮೂರ
ಸಣ್ಣಕ್ಕಿ ಬಯಲು ಬೆಳೆಯಲಿ ॥ [೨]

ಉತ್ತರ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮಳೆರಾಯನನ್ನು ಆಹ್ವಾನಿಸುವ ಹಲವಾರು ಪದ್ಧತಿಗಳುಂಟು. ಉದಾಹರಣೆಗಾಗಿ ಕೆಲವೊಂದನ್ನು ಇಲ್ಲಿ ವಿವರಿಸಲಾಗಿದೆ,

---

೧. ಡಾ. ದೇ. ಜವರೇಗೌಡ. ಜಾನಪದ ಅಧ್ಯಯನ
೨. ಶ್ರೀ ಡಿ. ಕೆ. ರಾಜೇಂದ್ರ. ಜಾನಪದ ಸಂಚಯ

೧) **ಗ್ರಾಮ ದೇವರಿಗೆ ನೀರು ಹಣಿಸುವದು :** ಎಲ್ಲ ುಡಿಗಳಿಗೆ ನೀರು ಹಾಕುತ್ತಾರೆ. ದೇವರನ್ನು ತಂಪು ಮಾಡಿ ೃಪ್ತಿ ಪಡಿಸುವದರಿಂದ ಮಳೆಯಾಗುವದೆಂಬ ನಂಬಿಕೆ ಿದೆ.

೨) **ಗುರುಚಿ ಮೆರವಣಿಗೆ :** ಮಳೆ ಬಾರದೇ ಇದ್ದಾಗ ಸಗಣಿಯಿಂದ ಗುರುಚಿ ಆಕಾರವನ್ನು ಮಾಡಿ ಬತ್ತಲೆ ಅಥವಾ ಅರೆನಗ್ನ ಹುಡುಗನ ಮೇಲೆ ಹೊರಿಸಿ ಮೆರವಣಿಗೆ ಹೊರಡಿಸು ರು. ಮೆರವಣಿಗೆ ಮನೆಯಿಂದ ಮನೆಗೆ ಸಾಗುವದು. ಹಾಗೆ ಾಗಿವಾಗ ಹಾದಿಯಲ್ಲಿಯ ಮನೆಯವರೆಲ್ಲರೂ ಗುರುಚಿಗೆ ೀರು ಹಣಿಸಿ ತಮ್ಮ ಶಕ್ತಿಗನುಸಾರವಾಗಿ ದಾನ ಕೊಡುವರು. ಮೆರವಣಿಗೆ ಮುಂದೆ ಸಾಗುತ್ತಿದ್ದಂತೆ ಕೆಲವರು ಕೆಳಗಿನಂತೆ ಹಾಡುತ್ತಾ ಮೆರವಣಿಗೆಯನ್ನು ಅನುಸರಿಸುವರು.

ಗುರುಚಿ ಗುರುಚಿ ಎಲ್ಲಾಡಿ ಬಂದೆ
ಹಳ್ಳಾಕೊಳ್ಳಾ ಹರದಾಡಿ ಬಂದೆ
ಕಾರ ಮಳಿಯೋ ಕಪಾಟಮಳಿಯೋ
ಬಣ್ಣಾ ಕೊಡತಿನಿ
ಬಾ ಮಳಿಯೋ, ಬಾ ಮಳಿಯೋ
ಸುಣ್ಣಾ ಕೊಡತಿನಿ
ಸುರಿ ಮಳಿಯೋ, ಸುರಿ ಮಳಿಯೋ

ಎಂದು ಮುಂತಾಗಿ ಹಾಡುವರು. ಇದೇ ರೀತಿಯಾಗಿ ಹುಡುಗರ ಕಳ್ಳ್ಯಾಮಳ್ಯಾ ಕಪಾಟಮಳ್ಯಾ ಆಟ ಮುಂತಾದವು ಗಳನ್ನು ಉದಾಹರಿಸಬಹುದು. ಇವುಗಳ ಜೊತೆಗೆ ವಾದ ಮಾಡುವ ಪದ್ಧತಿ, ಕತ್ತೆ ಮೆರವಣಿಗೆ, ಹುಡುಗರ ಇನ್ನಿತರ

ಆಟಗಳು ಕೂಡ ಮಳೆರಾಯನನ್ನು ಆಹ್ವಾನಿಸುವ ಸಂಪ್ರದಾಯ ಗಳಾಗಿವೆ.

ಮಳೆರಾಯನನ್ನು ಆಹ್ವಾನಿಸುವ ಪದ್ಧತಿ ಇರುವ ಹಾಗೆ, ಮಳೆ ಹೆಚ್ಚಾದಾಗ ಅತಿವೃಷ್ಟಿಯಿಂದಾಗುವ ಹಾನಿಯನ್ನು ತಡೆಗಟ್ಟಲು ಕೆಲವು ಸಂಪ್ರದಾಯದ ಆಚರಣೆಗಳುಂಟು. ಮಳೆ ಬರುವಾಗ ಒಂದು ಮನೆಯಿಂದ ಬೇರೆ ಮನೆಗೆ ಬೆಂಕಿ ಒಯ್ದರೆ ಬಂದ ಮಳೆ ಬಯಲಾಗುವುದು ಎಂಬ ನಂಬಿಕೆ ಇಂದಿಗೂ ಇದೆ. ಅತಿವೃಷ್ಟಿಯಾದಾಗ ಅದರ ಪರಿಣಾಮ ಕಡಿಮೆಮಾಡು ವದಕ್ಕಾಗಿ ಬೆಂಕಿ ಹೊರಗೆ ಚೆಲ್ಲುವ ವಾಡಿಕೆ ಉಂಟು.

ಹೀಗೆ ಮಳೆರಾಯನನ್ನು ಪೂಜಿಸಿ ಸ್ವಾಗತಿಸುವ ಸಂಪ್ರದಾಯ ಇಂದಿಗೂ ಪ್ರಚಲಿತವಿದೆ. ನೀರಾವರಿ ಸೌಲಭ್ಯ ಹೆಚ್ಚುತ್ತಿರುವದರಿಂದ ಇಂಥ ಆಚರಣೆಗಳು ಇಂದು ಕಡಿಮೆ ಆಗುತ್ತಿವೆ. ಆದರೂ ಇನ್ನೂ ಹಲವಾರು ಕಡೆ ಈ ಆಚರಣೆಗಳನ್ನು ಇಂದಿಗೂ ನೋಡಬಹುದು.

ಮಾನವನ ಜೀವನವನ್ನು ರೂಪಿಸುವಲ್ಲಿ ಮತ್ತು ಅವನ ನಾಗರಿಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯ ಆಚರಣೆಗಳು ವಿಶೇಷ ಮಹತ್ವ ಪಡೆದಿವೆ. ಭಾರತದಂತಹ ಕೃಷಿ ಪ್ರಧಾನವಾಗಿರುವ ರಾಷ್ಟ್ರದಲ್ಲಿ ಕೃಷಿಗೆ ಸಂಬಂಧಿಸಿದ ಆಚರಣೆಗಳು ಅನಿವಾರ್ಯ. ಹೊಸ ಮಳೆ ಬಿದ್ದ ಕೂಡಲೇ ಎರುಕಟ್ಟಿಕೊಂಡು ಬೀದಿಗಳಲ್ಲಿ ಮೆರವಣಿಗೆ ಹೊರಡುತ್ತಾರೆ.

ಉತ್ತರ ಕರ್ನಾಟಕದ ಕೆಲವೊಂದು ಕಡೆಗಳಲ್ಲಿ ಮುಂಗಾರು ಮಳೆ ಬಿದ್ದ ಕೂಡಲೇ ಬಿತ್ತನೆಯ ಕಾರ್ಯ

ವನ್ನು ಪ್ರಾರಂಭಿಸುವ ಪೂರ್ವದಲ್ಲಿ ಆ ಊರ ಗ್ರಾಮದೇವತೆಗೆ 'ಉಡಿ' ತುಂಬುವ ಸಂಪ್ರದಾಯ ಉಂಟು. ಈ ಕಾರ್ಯ ಮುಗಿದ ನಂತರವೇ ರೈತನ ಮುಂದಿನ ಕಾರ್ಯ ಪ್ರಾರಂಭವಾಗುತ್ತದೆ.

ಬಿತ್ತುವ ಕಾರ್ಯ ಪ್ರಾರಂಭವಾಗುವ ಮೊದಲನೇ ದಿವಸ 'ಕೂರಿಗೆ' ಪೂಜೆ. ಬಿತ್ತುವ ಕೂರಿಗೆ (ಸಲಕರಣೆ) ಹೆಣ್ಣು ದೇವತೆ ಎಂದು ಪರಿಗಣಿಸಿ ಕೂರಿಗೆಗೆ ಹೊಸ ಸೀರೆ ಉಡಿಸಿ, ಕುಪ್ಪಸ ತೊಡಿಸಿ, ಬಂಗಾರದ ಆಭರಣಗಳನ್ನು ತೊಡಿಸಿ ಪೂಜಿಸುವರು. ಪೂಜಿಸಿದ ನಂತರ ಬಿತ್ತನೆಯ ಕೆಲಸವನ್ನು ಸಾಗು ಮಾಡುವರು. ಅಂದು ಪೂರ್ತಿ ದಿವಸ ಬಿತ್ತನೆ ಕೇವಲ ಐದು ಮಾಲವು (ತಿರುವು) ತಿರುಗಿಸಿ ಬಿಡುವರು.

ಕಾರ ಹುಣ್ಣಿಮೆಯಿಂದ ಪ್ರಾರಂಭವಾದ ರೈತನ ಪೂಜೆ ವಿಧಿ-ವಿಧಾನಗಳು ರಾಶಿ ಬಂದು ಮನೆ ಸೇರುವವರೆಗೆ ಒಂದಿಲ್ಲ ಒಂದು ರೀತಿಯಲ್ಲಿ ಆಚರಿಸಲ್ಪಡುತ್ತವೆ. ಕಾರ ಹುಣ್ಣಿಮೆಗೆ ಬೀಜ ಹಂಚುವ ಕೆಲಸ ಪ್ರಾರಂಭ. ಇದು ಮಳೆಯ ಸ್ವಾಗತ. ಹೊಲ ಗದ್ದೆ, ತೋಟಗಳಲ್ಲಿ ಬೆಳೆ ಹುಲುಸಾಗಿ ಬೆಳೆದು ನಿಂತಾಗ ಸೀಗಿ ಹುಣ್ಣಿಮೆ, ಮತ್ತು ಎಳ್ಳುಅಮಾಸಿಗಳೆಂದು 'ಚರಗ' ಚೆಲ್ಲುವ ವಾಡಿಕೆ ಇದೆ. ಈ ಚರಗ ಚೆಲ್ಲುವ ಹಬ್ಬದ ದಿವಸ ವಿವಿಧ ರೀತಿಯಲ್ಲಿ ತಯಾರಿಸಿದ ಅಡಿಗೆಯನ್ನು ಹೊಲಗಳಿಗೆ ಕಟ್ಟಿಕೊಂಡು ಹೋಗಿ ಹೊಲದಲ್ಲಿ ಬೆಳೆಯನ್ನು ಪೂಜಿಸಿ, ಹೊಲದ ತುಂಬ ತಿರುಗಾಡಿ ನೈವೇದ್ಯವನ್ನು ಚೆಲ್ಲುವ ಪದ್ಧತಿ ಇದೆ. ಮೊದಲ ಸಲ ಗರ್ಭಿಣಿ ಆದ ಸ್ತ್ರೀಯರಿಗೆ ಹೂ ಮುಡಿಸುವ

ಪದ್ಧತಿ ಇದ್ದ ಹಾಗೆ ಬೆಳೆಗಳು ಹುಲುಸಾಗಿ ಬೆಳೆದು ನಿಂತಾಗ ಚರಗ ಚೆಲ್ಲುವ ಪದ್ಧತಿಯು ಬೆಳೆಗಳಿಗೆ ಹೂ ಮುಡಿಸುವ ಕಾರ್ಯ ಎಂಬಂತೆ ಆಚರಣೆಗೊಳ್ಳುತ್ತಿದೆ.

ಇದೇ ರೀತಿ, ದೀಪಾವಳಿ, ಸಂಕ್ರಾಂತಿ, ಹುತ್ತುರಿ ಹಬ್ಬ, ಸುಗ್ಗಿಯ ಸಂಪ್ರದಾಯಗಳು, ಮಣ್ಣು ಪೂಜೆ, ಛಟ್ಟಿ ಅಮಾವಾಸಿ, ಇತ್ಯಾದಿಗಳು ಹೊಲ ಗದ್ದೆ, ತೋಟಗಳಲ್ಲಿ ಬೆಳೆ ಹುಲುಸಾಗಿ ಬೆಳೆಯುಲು ಆಚರಿಸುವ ಆಚರಣೆಗಳಾಗಿವೆ.

ಪೈರಿಗೆ ರೋಗ ಬಂದಾಗ ಮತ್ತು ಪೈರು ಹುಲುಸಾಗಿ ಬೆಳೆದು ನಿಂತಾಗ ದೃಷ್ಟಿ ದೋಷ ನಿವಾರಣೆಗಾಗಿ ಹಲವಾರು ಆಚರಣೆಗಳನ್ನು ಆಚರಿಸುತ್ತಾರೆ. ಉದಾಹರಣೆಗಾಗಿ. ಪಡುವಲ ಕುಂಬಳ, ಬದನೆ, ಮೆಣಸಿನಕಾಯಿ ಗಿಡಗಳು ಹುಲುಸಾಗಿ ಬೆಳೆದಾಗ ದೃಷ್ಟಿದೋಷ ನಿವಾರಣೆಗಾಗಿ ಸುಣ್ಣ ಬಳಿದ ಮಡಿಕೆಯನ್ನು ತೂಗು ಹಾಕುತ್ತಾರೆ. ಮೊದಲು ಬಿಟ್ಟ ಕಾಯಿಯನ್ನು, ತರಕಾರಿಯನ್ನು ದೇವರಿಗೊ, ಪೂಜಾರಿಗೊ ಅಥವಾ ಹಿರಿಯರಿಗೋ ಅರ್ಪಿಸಿದರೆ ಮುಂದಿನ ಫಲ ಹುಲಿಸುತ್ತದೆ ಎಂಬ ನಂಬಿಕೆಯು ಉಂಟು.

ಜೀವನದಲ್ಲಿ ಹಾಗೂ ಸುತ್ತು ಮುತ್ತು ನಡೆಯುವ ಘಟನೆಗಳಿಗೆ ಕಾರ್ಯಕಾರಣ ಸಂಬಂಧವನ್ನು ಕಲ್ಪಿಸುವಾಗ ಎಷ್ಟೋ ನಂಬಿಕೆಗಳು ಹುಟ್ಟಿಕೊಂಡಿವೆ. ಹವಾಮಾನ ಮತ್ತು ವ್ಯವಸಾಯಕ್ಕೆ ಸಂಬಂಧಿಸಿದ ಹಲವಾರು ನಂಬಿಕೆಗಳು ಇಂದಿಗೂ ಪ್ರಚಲಿತದಲ್ಲಿವೆ, ಉದಾಹರಣೆಗಾಗಿ—

‘ಅತ್ತ್ರದ ಮಳೆ ಹುಯ್ಯದಿದ್ದರೆ ಹೆತ್ತ ತಾಯಿ ಹಿಟ್ಟು ಕೊಡುವದಿಲ್ಲ.

"ಭರಣಿ ಹುಯ್ದ್ದರೆ, ಧರಣಿಗೆ ಭಾಗ್ಯ," ೧
"ಡೋಣಿ ಬೆಳೆದರೆ ಓಣಿಯೆಲ್ಲಿ ಜೋಳ."
"ಆದರೆ ಹಸ್ತ ಆಗದಿದ್ದರೆ ರೈತ ಹಲ್ಲ ಕಿಸ್ತ."

ಇವೇ ಮೊದಲಾದ ನಂಬಿಕೆಗಳುಂಟು, ಯಾವ ಮಳೆಗಳು ಬರದೇ ಇದ್ದರೂ ಈ ಮಳೆಗಳು ಬರಲೇಬೇಕು. ಅವು ಬರದೇ ಇದ್ದರೆ ಬೆಳೆಗಳಿಗೆ ನಷ್ಟ ಎಂಬುದು ಈಗಲೂ ಸತ್ಯವಾಗಿದೆ. ಕಪ್ಪೆ ಎಡೆಬಿಡದೆ ವಟಗುಟ್ಟಿದರೆ, ಮೊಟ್ಟೆ ಇರುವೆ ಗೂಡಿನಿಂದ ಹೊರಬಂದರೆ, ಮಿಡಿತಿಗಳು ಎದ್ದು ಆಡಿದರೆ, ಮಳೆ ಬರುತ್ತದೆ ಎಂಬ ನಂಬಿಗೆ ಉಂಟು. ೨

"ಹರ್ಯಾಗ ಬಂದ ಮಳಿ ಅಲ್ಲ, ಸಂಜಿಗೆ ಬಂದ ಅಳಿಯ ಅಲ್ಲ". ಸಂಜಿಗೆ ಬಂದ ಮಳೆ ಬೇಗ ನಿಲ್ಲುವದಿಲ್ಲ ಎಂಬುದೇ ಇದರ ಅರ್ಥ.

ನಂಬಿಕೆ, ಹಬ್ಬ ಹರಿದಿನಗಳಲ್ಲಿ, ಸಂಪ್ರದಾಯ ಆಚರಣೆಗಳಲ್ಲಿ ನಮ್ಮ ರೈತ ದುಂದುವೆಚ್ಚಕ್ಕೆ ತುತ್ತಾಗುತ್ತಾನೆ. ಮದುವೆಯ ಸಂದರ್ಭದಲ್ಲಂತೂ ಹೇಳತೀರದಷ್ಟು ವೆಚ್ಚ ಮಾಡಬೇಕಾಗುತ್ತದೆ. ಅದೇ ರೀತಿ ಜಾತ್ರೆ, ತೀರ್ಥ-ಕ್ಷೇತ್ರಗಳಿಗೆ ಭೆಟ್ಟಿ, ಮುಂಜಿವಿ ಇಂಥ ಹಲವಾರು ಪ್ರಸಂಗಗಳಲ್ಲಿ ನೀರಿ

---

೧ ಮತ್ತು ೨ ಡಾ. ದೇ. ಜವರೇಗೌಡ, ಜಾನಪದ ಅಧ್ಯಯನ.

ನಂತೆ ಹಣವನ್ನು ವೆಚ್ಚ ಮಾಡಬೇಕಾಗುತ್ತದೆ. ಆದಕ್ಕಾಗಿ ಜಾನಪದರು, "ಮದುವೆ ಮಾಡಿ ನೋಡು, ಮನೆ ಕಟ್ಟಿ ನೋಡು" ಎಂದಿದ್ದಾರೆ. ಜಾನಪದರು ವೆಚ್ಚ ಮಾಡುವದು ಕಡಿಮೆ. ಆದರೆ ಮಾಡಿದರೆ ದುಂದುವೆಚ್ಚ.

## ೯. ಉಪಸಂಹಾರ

ಅರ್ಥಶಾಸ್ತ್ರವು ಆಧುನಿಕ ಶಾಸ್ತ್ರವಾದರೂ ಅದರ ಮೂಲವನ್ನು ನಾವು ಆದಿಮಾನವನ ಚಟುವಟಿಕೆಗಳಲ್ಲಿ ಕಾಣುತ್ತೇವೆ. ಮಾನವನ ನಾಗರಿಕತೆ ಬೆಳೆದಂತೆ ಆರ್ಥಿಕ ಚಟುವಟಿಕೆಗಳು ವಿಕಾಸಗೊಂಡಿವೆ ವಿಕಾಸಗೊಂಡ ಆರ್ಥಿಕ ಚಟವಟಿಕೆಗಳಿಗೆ ಪಾಶ್ಚಿಮಾತ್ಯ ವಿದ್ವಾಂಸರು ಒಂದು ಚೌಕಟ್ಟನ್ನು ಒದಗಿಸಿ ಅರ್ಥಶಾಸ್ತ್ರದ ರೂಪ ರೇಷೆಗಳನ್ನು ವಿವರಿಸಿದ್ದಾರೆ.

ಹೀಗೆ ಪಾಶ್ಚಿಮಾತ್ಯ ವಿದ್ವಾಂಸರಿಂದ ಅರ್ಥಶಾಸ್ತ್ರಕ್ಕೆ ಒಂದು ಚೌಕಟ್ಟು ಬಂದಿದ್ದರೂ ನಮ್ಮ ಜನಪದ ಅಂಗಗಳಾದಂಥ ಜನಪದ ವಾಙ್ಮಯ, ಜನಪದ ಧರ್ಮ, ಜಾನಪದ ವಿಜ್ಞಾನ, ಜಾನಪದ ರೂಢಿ, ಸಂಪ್ರದಾಯ ಹಾಗೂ ಜಾನಪದ ಕ್ರಿಯೆಗಳಲ್ಲಿ ಹಲವಾರು ಆರ್ಥಿಕ ವಿಚಾರಗಳನ್ನು ಕಾಣುತ್ತೇವೆ.

ಗಾದೆಗಳಲ್ಲಂತೂ ಅತ್ಯಮೂಲ್ಯವಾದ ವೈಚಾರಿಕತೆಯನ್ನು ನಾವು ಕಂಡುಕೊಳ್ಳುತ್ತೇವೆ. ಉದಾಹರಣೆಗಾಗಿ :

'ದುಡಿತವೇ ದುಡ್ಡಿನ ತಾಯಿ'
'ಕೈ ಕೆಸರಾದರೆ ಬಾಯಿ ಮೊಸರು'
'ಆಳಾಗಿ ದುಡಿ ಅರಸಾಗಿ ಉಣ್ಣು'
'ಕಡ ಹುಟ್ಟಿ ಬಡವ ಕೆಟ್ಟ'
'ಹಾಸಿಗೆ ಇದ್ದಷ್ಟು ಕಾಲು ಚಾಚು'
'ಗಳಿಕೆ ನೋಡಿ ಬಳಿಕೆ ಮಾಡು'

ಮೊದಲಾದ ಗಾದೆಗಳು ದಿನನಿತ್ಯ ಜೀವನದ ಮಾರ್ಗದರ್ಶನಗಳಾಗಿವೆ.

# ಗ್ರಂಥಋಣ

೧. ಅರ್ಥಶಾಸ್ತ್ರದ ಮೂಲ ತತ್ವಗಳು -ಪ್ರೊ. ಕೆ. ಡಿ. ಬಸವ

೨. ಜಾನಪದ ಉಪಾಸನೆ -ಪ್ರೊ ಜ್ಯೋತಿ ಹೊಸೂರ

೩. ಜಾನಪದ ಅಧ್ಯಯನ -ಡಾ. ದೇ. ಜವರೇಗೌಡ

೪. ಜಾನಪದ ಸಾಹಿತ್ಯ ದರ್ಶನ -ಶ್ರೀ ಮೈ. ಸೂ. ಶೇಷಗಿರಿರಾವ್

೫. ಕರ್ನಾಟಕದ ಜಾನಪದ ರಂಗಭೂಮಿ -ಶ್ರೀ ಎಂ ಟಿ. ಧೂಪದ

೬. ಜಾನಪದ ಸಂಚಯ -ಶ್ರೀ ಡಿ. ಕೆ. ರಾಜೇಂದ್ರ

೭. ನಮ್ಮ ಸಂಸ್ಕೃತಿಯ ಪರಂಪರೆ -ಡಾ. ಬೆಟಗೇರಿ ಕೃಷ್ಣಶರ್ಮ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| V | ೨೨ | ಒದುಗರು | ಓದುಗರು |
| ೧ | ೧೩ | ಅದ್ದರಿಂದ | ಆದ್ದರಿಂದ |
| ೬ | ೨೧ | Croducersgoods) | (Producers' goods) |
| ೭ | ೧೩ | ವೆಚ್ಚಕ್ಕೆ | ವೆಚ್ಚಕ್ಕೆ |
| ೧೨ | ೧೨-೧೩ | ಅಯುಗಾರರು | ಆಯುಗಾರರು |
| ೧೬ | ೨೧ | ಅನಂದದಿಂದ | ಆನಂದದಿಂದ |
| ೧೭ | ೨೦ | ರೖತನ ಮನೆಗೆ | ರೈತನ ಮನೆಗೆ |
| ೧೮ | ೩ | ಯಂತ್ರೋಂಪಕರಣಗಳ | ಯಂತ್ರೋಪಕರಣಗಳ |
| ೧೯ | ೧೯ | ಪದ್ದತಿಯಲ್ಲಿ | ಪದ್ಧತಿಯಲ್ಲಿ |
| ೨೦ | ೧೪ | ಯಾಂತ್ರೀಕಕೃತ | ಯಾಂತ್ರೀಕೃತ |
| ೨೩ | ೧೨ | ತಗೆದುಕೊಂಡವನೊಂದಿಗೆ | ತೆಗೆದುಕೊಂಡವನೊಂದಿಗೆ |
| ೨೪ | ೨ | Organiasation | Organisation |
| ೨೪ | ೧೮ | ಗುಣಮಟ್ಟವನ್ನು | ಗುಣಮಟ್ಟವನ್ನು |
| ೨೮ | ೧೯ | ಅಯುಗಾರರಲ್ಲಿ | ಆಯುಗಾರರಲ್ಲಿ |

| | | | |
|---|---|---|---|
| ೨೮ | ೨೦ | ಬಿಂದ | ಬಿಂದು |
| ೨೯ | ೬ | ಅಯುಗಾರರ | ಆಯುಗಾರರ |
| ೨೯ | ೧೨ | ಹೋಲೇರು | ಹೊಲೇರು |
| ೨೯ | ೨೨ | ರೈತನಿಂದೆ | ರೈತನಿಂದ |
| ೩೧ | ೮ | ತರೇಬೆತಿ | ತರಬೇತಿ |
| ೩೧ | ೧೩ | ಹೆಚ್ಟುತ್ತಿರುವ | ಹೆಚ್ಚುತ್ತಿರುವ |
| ೩೪ | ೧೧ | ಸಂಕಷ್ಟಗಳನ್ನು | ಸಂಕಷ್ಟಗಳನ್ನು |

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

೧. ಜನಪದ ಸಾಹಿತ್ಯದಲ್ಲಿ ಮಾತೃವಾತ್ಸಲ್ಯ
—ಲೀಲಾವತಿ ಬಿ. ತೋರಣಗಟ್ಟಿ

೨. ಜನಪದದಲ್ಲಿ ಮಕ್ಕಳ ಸಾಹಿತ್ಯ
—ಸಂಗಮೇಶ ಎಂ. ಬಿರಾದಾ

೩. ಜನಪದ ಸಾಹಿತ್ಯದಲ್ಲಿ ಹಾಸ್ಯ
—ಮೃತ್ಯುಂಜಯ ಹೊರಕೇ

೪. ಜನಪದ ಸಾಹಿತ್ಯದಲ್ಲಿ ನೀತಿ
—ಎಂ. ಎಸ್. ವಾ

೫. ಜನಪದ ಕಾವ್ಯ
—ಗಿರಡ್ಡಿ ಗೋವಿಂದರಾ

೬. ಜನಪದ ಕಾವ್ಯದಲ್ಲಿ ಜೀವನಧರ್ಮ
—ಬಿ. ವ್ಹಿ. ಮಲ್ಲಾಪು

೭. ಜಾನಪದ ವೀರಗೀತೆಗಳು
—ಬಿ. ಬಿ. ಮಹೀಶವಾ

೮. ಜಾನಪದ ಕಥೆಗಳು
—ಎಲ್. ಆರ್. ಹೆಗ

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦೦೦೩